# ಸುಗ್ಗಿಯ ಕತೆಗಳು




ಮುನ್ನುಡಿಕಾರರು:

ಮೈಸೂರು ಸಂಸ್ಥಾನದ ಪ್ರಾಥಮಿಕ ವಿದ್ಯಾಧಿಕಾರಿಗಳಾದ

**ಶ್ರೀ. ಡಾಕ್ಟರ್ ಕೆ. ಎನ್. ಕಿಣಿ**

ಎಂ.ಎ. (ಆನರ್ಸ್), ಎ.ಎಂ., ಪಿಎಚ್.ಡಿ. (ಕೊಲಂಬಿಯ)

ಡಿಪ್. ಇನ್. ಎಜುಕೇಷನ್





ಬರೆದವರು:

**ಬ. ನ. ಸುಂದರರಾವ್**



ಪ್ರಕಾಶಕರು:

**ಎಸ್. ಎಸ್. ಎನ್. ಬುಕ್ ಡಿಪೋ**

ಬೆಂಗಳೂರು ನಗರ

೧೯೪೬

# ಮುನ್ನುಡಿ

ಶ್ರೀಯುತ ಬ. ನ. ಸುಂದರರಾಯರು ಈ ಪುಸ್ತಕದಲ್ಲಿ ಹದಿನಾಲ್ಕು ಕಥೆಗಳನ್ನು ಸಂಗ್ರಹಿಸಿದ್ದಾರೆ. ಅವುಗಳಲ್ಲಿ ಕೆಲವು ಮೈಸೂರಿನ ಅನೇಕ ಕನ್ನಡ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದುವು. ಈ ಕಥೆಗಳು ಸಾಮಾನ್ಯಜನರಿಗೂ ಕೂಡಾ ಅರ್ಥವಾಗುವಂತಿವೆ. ತಮಗೆ ವಿರಾಮ ದೊರೆತಾಗ ಓದಿ ನಲಿಯಲು ಯೋಗ್ಯವಾಗಿಯೂ, ನೀತಿದಾಯಕವಾಗಿಯೂ ಇವೆ.

ಅಕ್ಷರ ಪ್ರಚಾರ ಕಾರ್ಯ ನಮ್ಮ ದೇಶದಲ್ಲಿ ಬಿರುಸಾಗಿ ಸಾಗುತ್ತಿದೆ. ಆದುದರಿಂದ ಕಥೆಗಳನ್ನೋದುವುದರ ಮೂಲಕ ತಮ್ಮ ವಿರಾಮ ಕಾಲವನ್ನು ಸರಿಯಾದ ರೀತಿಯಲ್ಲಿ ವಿನಿಯೋಗ ಮಾಡಿ, ಸಂತೋಷ ಪಡುವವರೂ ಹೆಚ್ಚುತ್ತಿದ್ದಾರೆ. ಹಳ್ಳಿಗಳಲ್ಲಿ ಅನೇಕರು ವರ್ಷವೆಲ್ಲಾ ದುಡಿಯುವುದಿಲ್ಲ. ಕೆಲವರು ಕೆಲವು ತಿಂಗಳು ಮಾತ್ರ ಕೆಲಸ ಮಾಡುತ್ತಾರೆ. ಅಂತಹವರು ತಮಗೆ ದೊರೆತ ವಿರಾಮವನ್ನು ಅನ್ಯಾಯವಾಗಿ ಕಳೆಯುತ್ತಾರೆ. ಹೀಗೆ ಮಾಡದೆ, ಶ್ರೀ. ಸುಂದರರಾಯರಿಂದ ರಚಿಸಲ್ಪಟ್ಟ ಇಂತಹ ಕಥೆಗಳನ್ನು ಓದಿ ಸಂತೋಷಪಡಬಹುದು; ತಮ್ಮ ನಾಗರಿಕತೆಯನ್ನೂ ವೃದ್ಧಿಗೊಳಿಸಿಕೊಳ್ಳಬಹುದು. ಗ್ರಾಮಾಂತರಗಳಲ್ಲಿ ವಿದ್ಯಾವಂತರಾದವರು ಸಂಜೆಯ ಹೊತ್ತಿನಲ್ಲಿ ಅನಕ್ಷರಸ್ಥರ ಸಭೆಯನ್ನೇರ್ಪಡಿಸಿ, ಈ ಕಥೆಗಳನ್ನು ಅವರಿಗೆ ಓದಿ ಹೇಳುವುದರಿಂದ ಅವರ ಜೀವನವೂ ಸ್ವಲ್ಪ ಸಂತೋಷಕರವಾಗಬಹುದು.

ಪಟ್ಟಣಗಳಲ್ಲಿಯೂ ಸಹ ಓದುಬರಹ ಬಲ್ಲ ಕೂಲಿಗಾರರು ತಮ್ಮ ಕೆಲಸವನ್ನು ಮುಗಿಸಿಕೊಂಡ ಬಳಿಕ ತಮ್ಮ ಸ್ವಂತ ಪ್ರಯೋಜನಕ್ಕಾಗಿ ಓದುವುದಲ್ಲದೆ, ಓದುಬಾರದ ಕೂಲಿಯವರನ್ನೂ ಕುಳ್ಳಿರಿಸಿಕೊಂಡು ಓದಿ, ಹರ್ಷಗೊಳಿಸಲು ಕನಿಷ್ಠಪಕ್ಷ ಅರ್ಧಗಂಟೆಯನ್ನಾದರೂ ಮೀಸಲಾಗಿಡಬಹುದು. ಇದರಿಂದ ಓದುವವರ ಮತ್ತು ಕೇಳುವವರ ಸಂಸ್ಕೃತಿ ಹೆಚ್ಚುತ್ತದೆ; ಮತ್ತು ಓದುಬಾರದವರೂ ಸಹ ನಲಿಯಲು ಅವಕಾಶ ದೊರೆತಂತಾಗುತ್ತದೆ. ಇಷ್ಟೇ ಅಲ್ಲದೆ, ನಮ್ಮ ನಾಡಿನ ಎಲ್ಲಾ ದರ್ಜೆಯ

ಹೆಂಗಸರೂ ಸಹ ಮಧ್ಯಾಹ್ನದ ವೇಳೆ ಈ ಕಥೆಗಳನ್ನೋದಿ ಸಂತೋಷಪಡ ಬಹುದು.

ಈ ಕಥೆಗಳೊಳಗಣ ವಿಷಯಗಳು ಅನೇಕ ವಿಚಾರಗಳಿಗೆ ಸಂಬಂಧ ಪಟ್ಟುವಾಗಿವೆ. ಐತಿಹಾಸಿಕ, ಸಾಮಾಜಿಕ, ಆರ್ಥಿಕ ಮತ್ತು ವಿದ್ಯಾಭ್ಯಾಸ ವಿಷಯಗಳು ಇವುಗಳಲ್ಲಿರುವುದರಿಂದ ಎಲ್ಲಾ ಮೇಧಾವಿಗಳಿಗೂ ಆನಂದವುಂಟುಮಾಡುವುದರಲ್ಲಿ ಯಾವ ಸಂದೇಹವೂ ಇಲ್ಲ. ಭಾಷೆಯು ನಿರರ್ಗಳವಾಗಿಯೂ, ಶೈಲಿಯು ಸುಲಭವಾಗಿಯೂ ಇವೆ.

ಈ ಪುಸ್ತಕವು ಎಲ್ಲಾ ಸ್ಕೂಲುಗಳ, ಕಾಲೇಜುಗಳ ಮತ್ತು ವಯಸ್ಕರ ಶಿಕ್ಷಣ ಶಾಲೆಗಳ ಪುಸ್ತಕ ಭಂಡಾರಗಳಲ್ಲಿಯೂ, ಸಾರ್ವಜನಿಕ ಮತ್ತು ಖಾಸಗಿ ಸಂಸ್ಥೆಗಳಲ್ಲಿಯೂ ಇರಿಸಲು ಯೋಗ್ಯವಾಗಿದೆ.

ಈ ಅಮೂಲ್ಯವಾದ ಮತ್ತು ಸ್ವಾರಸ್ಯವಾದ ಕಥೆಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುತ್ತಿರುವುದಕ್ಕಾಗಿ ಶ್ರೀ. ಸುಂದರರಾಯರನ್ನು ನಾನು ಅಭಿನಂದಿಸುತ್ತೇನೆ.

ಬೆಂಗಳೂರು ಸಿಟಿ, ಕೆ. ಎನ್. ಕಿಣಿ
ತಾ|| ೧೫-೭-೪೫

# ಅರಿಕೆ

"ಸಣ್ಣ ಕತೆಗಳು ಜೀವನದ ಪ್ರತಿಬಿಂಬ; ಕತೆಗಾರಿಕೆ ಒಂದು ಲಲಿತ ಕಲೆ" ಎಂದು ವಿದ್ವಾಂಸರೊಬ್ಬರು ಮೊನ್ನೆತಾನೆ ನಡೆದ ಸಣ್ಣಕತೆಗಾರರ ಸಮ್ಮೇಳನದಲ್ಲಿ ಉದ್ಘೋಷಿಸಿದರು. "ಬಾಳಿನ ಬೆಡಗು ಅಡಗಿದೆ ಬಡವನ ಗುಡಿಸಲಲ್ಲಿ" ಎಂದು ಬಹಳ ಹಿಂದೆಯೇ ಶ್ರೀ ಸ್ವಾಮಿ ವಿವೇಕಾನಂದರು ತಮ್ಮ ಭಾಷಣವೊಂದರಲ್ಲಿ ನುಡಿದಿದ್ದರು. ಈ ಮಾತುಗಳು ಸತ್ಯವಾದುವು; ಅನುಭವಸಿದ್ಧವಾದುವು. ಆದ್ದರಿಂದ ಹಳ್ಳಿಯ ಬಾಳನ್ನೇ ಚಿತ್ರಿಸಿ, ಸಣ್ಣಕತೆಗಳ ರೂಪದಲ್ಲಿ ಬರೆದಿರುತ್ತೇನೆ.

ಹಿರಿಯರು ಕಿರಿಯರೆನ್ನದೆ ಎಲ್ಲರೂ ಓದಿ ನಲಿಯಲೆಂದು, ನನ್ನ ಕೈಲಾದ ಮಟ್ಟಿಗೂ ರೂಢಿಯಲ್ಲಿರುವ ತಿಳಿಗನ್ನಡದ ಪದಗಳನ್ನೇ ಬಳಸಿದ್ದೇನೆ.

ಸಾಮಾಜಿಕ ಕತೆಗಳಲ್ಲಿ ಕಂಡುಬರುವ ಹೆಸರುಗಳು ಕೇವಲ ಕಾಲ್ಪನಿಕವೇ ಹೊರತು, ನಿಜವಲ್ಲ. ಅಲ್ಲದೆ ಯಾರನ್ನೂ ಉದ್ದೇಶಿಸಿ ಅವುಗಳನ್ನು ಬರೆದಿಲ್ಲ.

ಈ ಪುಸ್ತಕಕ್ಕೆ ಮುನ್ನುಡಿಯನ್ನು ಬರೆದುಕೊಟ್ಟು, ಉಪಕಾರ ಮಾಡಿದ, ಮೈಸೂರು ಸಂಸ್ಥಾನದ ಪ್ರಾಥಮಿಕ ವಿದ್ಯಾಧಿಕಾರಿಗಳಾದ ಶ್ರೀ. ಡಾ|| ಕೆ. ಎನ್. ಕಿಣಿಯವರಿಗೂ, ಈ ಕತೆಗಳನ್ನು ಪುಸ್ತಕ ರೂಪಕ್ಕೆ ತರುವ ಉದ್ಯಮದಲ್ಲಿ ನನಗೆ ಸಹಾಯ ಮಾಡಿದ ಬೆಂಗಳೂರು ತಾಲ್ಲೂಕು ವಿದ್ಯಾಧಿಕಾರಿಗಳಾದ ಶ್ರೀ. ಬಿ. ವೆಂಕಟೇಶಶಾಸ್ತ್ರಿ, ಬಿ.ಎ., ಬಿ.ಟಿ. ಅವರಿಗೂ, ಕತೆಗಳ ರಚನೆಯಲ್ಲಿ ಸೂಕ್ತ ಸಲಹೆಗಳನ್ನಿತ್ತ ಶ್ರೀ. ಕೆ.ಎಸ್. ನಾಗರಾಜನ್, ಬಿ.ಎಸ್‌ಸಿ., ಅವರಿಗೂ, ಈ ಪುಸ್ತಕವನ್ನು ಬೆಳಕಿಗೆ ತಂದ ಎಸ್. ಎಸ್. ಎನ್. ಬುಕ್ ಡಿಪೋ ಮಾಲೀಕರಾದ ಶ್ರೀ. ಎಂ. ರಾಮರಾಯರಿಗೂ ನನ್ನ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಬಿ. ನ. ಸುಂದರರಾವ್

# ಒಳಗೆ ಏನಿದೆ?

# ಕತೆ ಬೇಕೆ ಕಥೆ

—::—

ಅಂದು ನಾನು, ನಮ್ಮ ತಾತ, ನನ್ನ ತಂಗಿ ಎಲ್ಲರೂ ಕಣದಲ್ಲಿ ಕುಳಿತುಕೊಂಡು ಹರಟೆ ಹೊಡೆಯುತ್ತಿದ್ದೆವು. ಸುಗ್ಗಿಯ ಕಾಲವಾದ್ದರಿಂದ ರೈತರು ಮತ್ತು ಆಳುಗಳು ಕಣದಲ್ಲಿ ಕೆಲಸ ಮಾಡುತ್ತಿದ್ದರು. ನಮ್ಮ ತಾತನು ಆ ಮಾತು ಈ ಮಾತು ಆಡುತ್ತಿದ್ದರೂ, ಆತನ ಒಂದು ಕಣ್ಣು ಮಾತ್ರ ಕೆಲಸಗಾರರ ಮೇಲೆಯೇ ಇರುತ್ತಿತ್ತು. ರಾಗೀ ಕಾಳು, ಅದರ ಉಪಯೋಗ - ಇವುಗಳನ್ನು ಕುರಿತು ಅವನು ನಮಗೆ ಬಹು ಸ್ವಾರಸ್ಯವಾಗಿ ಬೋಧೆ ಮಾಡುತ್ತಿದ್ದನು. ನಾನೂ ನನ್ನ ಜತೆಯಲ್ಲಿದ್ದ ಇನ್ನು ಕೆಲವರು (ಚಿಕ್ಕ ಹುಡುಗಿಯಾಗಿದ್ದಾಗ) "ರಾಗಿ ಹೇಗೆ ಬೆಳೆಯುತ್ತೆ? ಭತ್ತ, ರಾಗಿ ಇದ್ದ ಹಾಗೆ ಏಕಿಲ್ಲ? ಗೊಬ್ಬರ ಹಾಕದೆ ಇದ್ದರೆ ಏನಾಗುತ್ತದೆ? ರಾಗಿಯನ್ನು ಅನ್ನಮಾಡಿದಂತೆ ಮಾಡಲು ಸಾಧ್ಯವೇ?" ಇವೇ ಮೊದಲಾದ ವಿಚಿತ್ರ ಪ್ರಶ್ನೆಗಳನ್ನು ಹಾಕುತ್ತಿದ್ದೆವು. ನಮ್ಮ ತಾತನಂತೂ ಸ್ವಲ್ಪವೂ ಬೇಸರಪಡದೆ ಉತ್ತರ ಕೊಡುತ್ತಿದ್ದನು.

ಇಷ್ಟು ಹೊತ್ತಿಗೆ ಸರಿಯಾಗಿ ಶ್ಯಾನುಭೋಗ ಸುಬ್ಬಣ್ಣ ಅಲ್ಲಿಗೆ ಬಂದ. "ಅಯ್ಯಾ ರಾಮಣ್ಣ ಏನು ಮಾಡುತ್ತಾ ಇದ್ದಿ? ಎಷ್ಟು ಖಂಡುಗ ಆಯಿತಪ್ಪಾ ರಾಗಿ?" ಎನ್ನುತ್ತಾ ನಮ್ಮೊಡನೆ ಕುಳಿತುಕೊಂಡು, ನಮ್ಮ ತಾತನಿಂದ ಒಂದು ಚಿಟಕೆ ನಶ್ಯವನ್ನು ತೆಗೆದುಕೊಂಡು ಮೂಗಿಗೇರಿಸಿ, ಕಂದಾಯ ಬಾಕಿ —ಖಜಾನೆ—ಫಜೀತಿ—ಎಂಬುದಾಗಿ ಏನೇನೋ ಗೊಣಗುಟ್ಟಿದ. ನಮಗಂತೂ ಏನೂ ಅರ್ಥವಾಗಲಿಲ್ಲ. ನಮ್ಮ ತಾತ "ಕಂದಾಯ ವಸೂಲಿ ಮೊದಲು ಮಾಡಪ್ಪಾ ಆಮೇಲೆ ಎಲ್ಲಾ ಕೆಲಸ. ಈ ಊರಿನ ಕುಳವೆಲ್ಲಾ ಕೊಟ್ಟುಬಿಟ್ಟರು ತಾನೆ? ಯಾವುದಾದರೂ ಕುಳ ಬಾಕಿ ಇದ್ದರೆ ಕರೆಸು. ನಾನೂ ಹೇಳ್ತೀನೆ" ಎಂದ. ಸುಬ್ಬಣ್ಣ ಒಂದು ಕೂಗು ಹಾಕುವ ಹೊತ್ತಿಗೆ ಇಬ್ಬರು ತೋಟಿಗಳು ದೊಣ್ಣೆ ಹಿಡಿದುಕೊಂಡು ಹಾಜರಾದರು. ನನಗಂತೂ ನಾನು ಸ್ಕೂಲಿನಲ್ಲಿ ಓದುತ್ತಿದ್ದ ಕತೆಯೊಂದು ನೆನಪಿಗೆ ಬಂತು. "ಒಂದು

ಯಕ್ಷಣಿ ಪೆಟ್ಟಿಗೆ, ಅದನ್ನು ಒತ್ತಿದರೆ ಇಬ್ಬರು ಪೊತರು ಸಿದ್ಧರಾಗಿ 'ಏನಪ್ಪಣೆ' ಎನ್ನುತ್ತಿದ್ದರು. ಇಲ್ಲಿಯೂ ಹಾಗೆಯೇ ಆಯಿತು. ಸುಬ್ಬಣ್ಣ ಸುಗ್ರೀವಾಜ್ಞೆ ಕೊಟ್ಟ. "ಲೋ ಕಾಳ, ಹೋಗಿ ಕೆಳಗಿನ ಬೀದಿ ರಂಗಪ್ಪ, ತಲೆಹರಟೆ ತಿಮ್ಮ, ಮೇಸ್ತ್ರಿ ಮುನಿಯಪ್ಪ ಇವರನ್ನು ಕರೆದುಕೊಂಡು ಬಾ. ಗೊತ್ತಾಯಿತೇನೋ, ಕೈಗೆ ಸಿಕ್ಕಿದ ಕುಳ ಹಿಡಿದುಕೊಂಡು ಬಾ, ಬಿಡಬೇಡ" ಎಂದ. ನಮಗೆಲ್ಲಾ ನಗು ಬಂತು. ಸುಬ್ಬಣ್ಣ ಸುಮ್ಮನಿರದೆ "ಏಕಮ್ಮಾ ನನ್ನ ಮಾತು ಕೇಳಿ ನಗ್ತೀಯಾ? ನಾಳೆ ನಿನ್ನ ಗಂಡ ಬಂದು ಅದು ಮಾಡು ಇದು ಮಾಡು ಅಂದರೆ ಆಗೇನು ಮಾಡ್ತೀ? ನಿಮ್ಮ ತಾತ ನಾನು ಇಬ್ಬರೂ ಸ್ನೇಹಿತರು. ನಾವೂ ಕೂಡ ಚಿಕ್ಕಂದಿನಲ್ಲಿ ನಿಮ್ಮ ಹಾಗೆಯೇ ಇದ್ದೆವು. ಆದರೆ ಈಗ ನಗುವೇ ಬಾರದು" ಎಂದ. ನಮಗೆ ಏಕೋ ಸ್ವಲ್ಪ ಅವಮಾನ ವಾದಂತಾಯಿತು.

ನನ್ನ ತಂಗಿ ಜಾನಕಿ "ಅಕ್ಕಾ ಅದೇನೇ ಸುಬ್ಬಣ್ಣ ಕುಳಾ ಕುಳಾ ಅಂತಾನೆ. ಮಾತು ಮಾತಿಗೂ ಕುಳಾ ಅನ್ನುತ್ತಾನಲ್ಲಾ? ಹಾಗಂದರೇನೇ?" ಎಂದು ಮೆಲ್ಲನೆ ಕಿವಿಯಲ್ಲಿ ಪಿಸುಗುಟ್ಟಿದಳು. "ನಂಗೆ ಗೊತ್ತಿದ್ದರಲ್ವೆ ನಿಂಗೆ ಹೇಳೋದು" ಎಂದೆ.

ಈ ಮಾತು ಕೇಳಿ ನಮ್ಮ ತಾತನು "ಅದೇನು?" ಅಂದ. ನಾನು— "ತಾತ, ಕುಳ ಅಂದರೇನು ಅನ್ನುತ್ತಾಳೆ ಜಾನಕಿ - ಅರ್ಥ ಹೇಳು. ಅವಳಿಗೆ ಬಹಳ ಆಶೆಯಂತೆ. ನನಗೂ ಗೊತ್ತಿಲ್ಲ...." ಎಂದೆ. ತಾತನು ನಕ್ಕು "ಆಗಲೇ ಯಾರೋ ಕತೆ ಹೇಳು ಅಂದರಲ್ಲಾ ಯಾರು? ಎಂದ. ಜಾನಕಿಯು "ನಾನು" ಎಂದು ಬೇಗನೆ ಉತ್ತರ ಕೊಟ್ಟಳು. ತಾತನು "ಕತೆ ಬೇಕೋ, ಕುಳದ ಅರ್ಥ ಬೇಕೋ?" ಎಂದು ಕೇಳಿದ. ಜಾನಕಿ "ಕತೆ ಬೇಕು" ಎಂದಳು. ನಾನು ಕುಳದ ಅರ್ಥ ಬೇಕು" ಎಂದೆ. ನನಗೂ ಜಾನಕಿಗೂ ಕಣ್ಣಿನಲ್ಲಿಯೇ ಜಗಳವಾಯಿತು. ಈ ಸೂಕ್ಷ್ಮ ನಮ್ಮ ತಾತ ತಿಳಿದುಕೊಂಡು "ಕತೆ ಬೇಕೆ ಕತೆ, ಆಗಲಿ, ಕುಳದ ಅರ್ಥವನ್ನೂ ಹೇಳ್ತೀನೆ; ಕತೆಯನ್ನೂ ಹೇಳುತ್ತೇನೆ" ಎಂದು ಹೇಳುತ್ತಿರುವಾಗ್ಗೆ ಜಾನಕಿ ಬಾಯಿ ಹಾಕಿ, ಮೊದಲು ಕತೆ ಹೇಳಬೇಕು" ಎಂದಳು. ಅದಕ್ಕವನು "ಕತೆ ಕುಳದ ಅರ್ಥ, ಎರಡನ್ನೂ ಒಂದೇ ಸಲ ಹೇಳ್ತೇನೆ" ಎಂದನು. ನಾವಿಬ್ಬರೂ 'ಹೂ' ಎಂದೆವು. ಕತೆಯು ಆರಂಭವಾಯಿತು:—

"ಕೇಳಿ ಮಕ್ಕಳಿರಾ! ಕುಳದ ಕತೆ ಬಹಳ ಚೆನ್ನಾಗಿದೆ. ಹಳೇಬೀಡು ಅಥವಾ ದ್ವಾರಸಮುದ್ರದಲ್ಲಿ ಒಬ್ಬ ರಾಜನಿದ್ದ. ಅವನ ಹೆಸರು ವಿಷ್ಣುವರ್ಧನ ಎಂದು. ಅವನು ಬಹಳ ಒಳ್ಳೆಯ ದೊರೆ. ಅವನ ಕಾಲದಲ್ಲಿ ಜನರೆಲ್ಲರೂ ಸುಖವಾಗಿದ್ದರು. ಎಲ್ಲಿ ನೋಡಿದರೂ ಹಸುರಾದ ಹೊಲ, ತುಂಬಿದ ಕೆರೆ, ಹಣ್ಣಿನ ಗಿಡಗಳು, ನೆಮ್ಮದಿಯ ಜನ. ಹೀಗಿರುವಾಗ ಒಬ್ಬ ಬ್ರಾಹ್ಮಣ ಈಶ್ವರನನ್ನು ನೋಡಬೇಕೆಂದು ಹೊರಟ. ಈಶ್ವರ ಸಿಗಲಿಲ್ಲ. ಇನ್ನೂ ಮುಂದೆ ಹೋದ. ಅಲ್ಲಿಯೂ ಕಾಣಲಿಲ್ಲ. ಕಡೆಗೆ ಚಂದ್ರದ್ರೋಣ ಪರ್ವತಕ್ಕೆ ಹೋದ. ಅಲ್ಲಿ ಕುಳಿತು ತಪಸ್ಸು ಮಾಡಿದ. ಈಶ್ವರನಿಗೆ ಬಹು ಸಂತೋಷ ವಾಯಿತು. ಬ್ರಾಹ್ಮಣನ ಹತ್ತಿರ ಬಂದ. ಏನು ಬೇಕಪ್ಪಾ ನಿನಗೆ ಎಂದ. ಬ್ರಾಹ್ಮಣನಿಗೆ ದಿಕ್ಕು ತೋಚಲಿಲ್ಲ. ಬೆಪ್ಪಾಗಿ ಮಂಕನಂತೆ ಕುಳಿತುಬಿಟ್ಟ. ಒಂದೆರಡು ಕ್ಷಣದಲ್ಲಿ ಜ್ಞಾನ ಬಂತು. ಸ್ವಾಮಿಾ ಎಂದು ಅಡ್ಡಬಿದ್ದ. "ಜಗದೀಶ್ವರ! ನಾನು ಬಡವ. ನಿಮ್ಮ ಗುರುತಿಗಾಗಿ ಏನಾದರೂ ಒಂದು ಪದಾರ್ಥ ಕೊಟ್ಟರೆ ಸಾಕು ಅಷ್ಟೆ. ತಮ್ಮ ದರುಶನವೇ ನನಗೆ ಭಾಗ್ಯ. ಇಂದು ನಾನು ಧನ್ಯ" ಎಂದ. ಅಷ್ಟರಲ್ಲಿ ಈಶ್ವರನು "ಹಾಗೆಯೇ ಆಗಲಿ. ನಾನೊಂದು ವಿಧವಾದ ರಸವನ್ನು ಕೊಡುತ್ತೇನೆ. ಅದನ್ನು ಕಬ್ಬಿಣದ ಮೇಲೆ ಹಾಕಿದರೆ ಚಿನ್ನವಾಗುತ್ತದೆ" ಎನ್ನುತ್ತಾ ಮಾಯವಾದ. ಬ್ರಾಹ್ಮಣನು ಕಣ್ಣು ಮುಚ್ಚಿ ತೆಗೆಯುವುದರೊಳಗಾಗಿ ಒಂದು ಚಿನ್ನದ ಬಟ್ಟಲು ಕಣ್ಣಿಗೆ ಬಿತ್ತು. ಅದರ ತುಂಬಾ ಒಂದು ಬಗೆಯ ರಸ. ಅದನ್ನು ನೋಡಿ ಬ್ರಾಹ್ಮಣನಿಗೆ ಆಶ್ಚರ್ಯವಾಯಿತು.

ಅದನ್ನು ತೆಗೆದುಕೊಂಡು ಹಳೇಬೀಡಿಗೆ ಬಂದ. ಸಮಿಾಪದಲ್ಲಿದ್ದ ಒಬ್ಬ ಕಮ್ಮಾರನ ಅಂಗಡಿಗೆ ಹೋದ. ಚಳಿಗಾಲವಾದ್ದರಿಂದ ಬೆಂಕಿಯ ಮುಂದೆ ಸ್ವಲ್ಪ ಹೊತ್ತು ಕುಳಿತ. ಅಷ್ಟು ಹೊತ್ತಿಗೆ ಸಂಜೆಯಾಗಲು ಸಂಧ್ಯಾವಂದನೆ ಮಾಡುವುದಕ್ಕೆ ನದಿಗೆ ಹೊರಡಬೇಕಾಯಿತು. ಆಗ ಅವನು ತನ್ನಲ್ಲಿದ್ದ ಗಂಟು ಮೂಟೆ, ಆ ಚಿನ್ನದ ಬಟ್ಟಲು ಇವುಗಳನ್ನು ಕಮ್ಮಾರನ ವಶಕ್ಕೆ ಕೊಟ್ಟು ಹೊರಟ. ಆದರೆ ಆ ಚಿನ್ನದ ಬಟ್ಟಲನ್ನು ಬಟ್ಟೆಯಲ್ಲಿಟ್ಟು ಗಂಟು ಹಾಕಿದ್ದನು. ಬ್ರಾಹ್ಮಣನ ಗಂಟಿನ ವೈಖರಿಯನ್ನು ತಿಳಿಯದ ಕಮ್ಮಾರ ಗಂಟನ್ನು ಎತ್ತಿ ಪಕ್ಕದ ಕಬ್ಬಿಣದ ತುಂಡುಗಳ ಮೇಲೆ ಕುಕ್ಕಿದನು. ಆಗ ಚಿನ್ನದ ಬಟ್ಟಲಿನಿಂದ ಒಂದು ತೊಟ್ಟು ರಸ ಕಬ್ಬಿಣದ

ತುಂಡುಗಳ ಮೇಲೆ ಬಿತ್ತು. ಆದರೆ ಅದನ್ನು ಯಾರೂ ಗಮನಿಸಲಿಲ್ಲ. ಸ್ವಲ್ಪ ಹೊತ್ತಿನ ಮೇಲೆ ಕಮ್ಮಾರನ ಹೆಂಡತಿಯು ಊಟಕ್ಕೆಂದು ಕರೆಯಲು ಅಲ್ಲಿಗೆ ಬಂದಳು. ಅವಳ ಕಣ್ಣಿಗೆ ಬಂಗಾರ ಕಾಣಿಸಿತು. 'ಕನಸೋ ಏನಿದು' ಎಂದುಕೊಂಡಳು. "ನಿಮ್ಮ ಅಂಗಡಿಯಲ್ಲಿ ಚಿನ್ನದ ತುಂಡುಗಳೂ ಇವೆಯಲ್ಲಾ" ಎಂದು ಹಿಗ್ಗಿಹೋದಳು. ಕಮ್ಮಾರನಿಗೆ ಈ ಮಾತು ಕೇಳಿ ಕಿವಿ ನೆಟ್ಟಗಾಯಿತು. ಅಲ್ಲಿದ್ದವರೆಲ್ಲಾ ಬೆರಗಾದರು. ಇವಳು ಮಾತ್ರ ಆ ಚಿನ್ನದ ತುಂಡುಗಳನ್ನೆಲ್ಲಾ ಆರಿಸಿಕೊಂಡು ಸೀರೆಯ ಮಡಿಲಲ್ಲಿ ಮುಚ್ಚಿಟ್ಟುಕೊಂಡಳು. ಕಮ್ಮಾರ ಅಚ್ಚರಿಯಿಂದ ಹುಡುಕತೊಡಗಿದ. ಇದಕ್ಕೆ ಕಾರಣವೇನು? ಕಬ್ಬಿಣ ಚಿನ್ನವಾಗಿದೆಯಲ್ಲಾ ಎಂದು ತನ್ನನ್ನು ತಾನೇ ಕೇಳಿಕೊಂಡ. ಎಷ್ಟು ಹುಡುಕಿದರೂ ಯಾವ ಪದಾರ್ಥದಿಂದ ಹೀಗಾಯಿತೆಂಬುದು ತಿಳಿಯಲಿಲ್ಲ. ಕಡೆಗೆ ಕಮ್ಮಾರನ ಹೆಂಡತಿಯೇ ಗೆದ್ದಳು.

"ಇದೇನು ಗಂಟು ಮೂಟೆ? ಇಗೋ ಇಲ್ಲಿದೆ ಚಿನ್ನದ ಕಳಶ" ಎನ್ನುತ್ತಾ ಅದನ್ನು ತೆಗೆದುಕೊಂಡು ಕುಣಿದಳು. ಮತ್ತೊಂದು ತೊಟ್ಟು ಚೆಲ್ಲಿತು. ಬಿದ್ದ ಜಾಗದಲ್ಲಿದ್ದ ಕಬ್ಬಿಣ ಬಂಗಾರವಾಯಿತು. ಇದನ್ನು ನೋಡಿ ಕಮ್ಮಾರನಿಗೂ ಕಮ್ಮಾರನ ಹೆಂಡತಿಗೂ ಅತಿಶಯವಾದ ಆನಂದ ವಾಯಿತು" ಅಷ್ಟರಲ್ಲಿ ಜಾನಕಿ ಬಾಯಿಹಾಕಿ, "ಬ್ರಾಹ್ಮಣ ಬರಲೇ ಇಲ್ಲವೇ? ಅವನೆಂತಹ ದಡ್ಡ? ಅಯ್ಯೋ ಹುಚ್ಚು ಬ್ರಾಹ್ಮಣ" ಎಂದಳು.

"ಕಮ್ಮಾರ, ಅವನ ಹೆಂಡತಿ ಇಬ್ಬರೂ ಮಾತನಾಡಿಕೊಂಡು ಗುಡಿಸಲಿಗೆ ಬೆಂಕಿ ಇಟ್ಟುಬಿಟ್ಟರು. ಹೀಗೆ ಕಮ್ಮಾರನ ಗುಡಿಸಲು ಸುಡುತ್ತಿರುವಾಗ್ಗೆ ಆ ಬ್ರಾಹ್ಮಣ ಬಂದ, ನೋಡಿದ; ಬೆಪ್ಪಾಗಿ ನಿಂತ. ಕಮ್ಮಾರನನ್ನು ಕೂಗಿದ. ಉತ್ತರ ಬರಲಿಲ್ಲ. "ಅಯ್ಯೋ ದೇವರೇ" ಎಂದು ಕೊರಗಿದ. ಇವನ ಪಾಡನ್ನು ನೋಡಿ, ದಾರಿಯ ಜನರು "ಏಕಪ್ಪಾ ಅಳುತ್ತೀಯೇ?" ಎಂದರು. ಇವನು 'ಕಮ್ಮಾರನನ್ನು ನೋಡಬೇಕು' ಎಂದ.

ಕಮ್ಮಾರನನ್ನು ಕರೆದರು. ಊರಿನ ಮುಖ್ಯಸ್ಥರೊಬ್ಬರು ನ್ಯಾಯ ಮಾಡಿದರು. ಅವನು "ಅಯ್ಯಾ ಬ್ರಾಹ್ಮಣ ನಾನೇನು ಮಾಡಲಿ? ನಿನ್ನ ಸಾಮಾನುಗಳನ್ನು ನಾನು ಬಹು ಜೋಪಾನವಾಗಿಯೇ ಇಟ್ಟಿದ್ದೆ. ಆದರೆ

ಬೆಂಕಿ ತಗುಲಿ ಎಲ್ಲವೂ ಸುಟ್ಟುಹೋದವು. ನನ್ನ ಗುಡಿಸಲೂ ಸುಟ್ಟು ಹೋಯಿತು. ದಯವಿಟ್ಟು ಈ ಸಲ ನನ್ನನ್ನು ಕ್ಷಮಿಸಬೇಕು" ಎಂದು ಅಂಗಲಾಚಿ ಬೇಡಿಕೊಂಡ. ಎಷ್ಟು ಒಳ್ಳೆಯ ಮಾತುಗಳನ್ನು ಆಡಿದರೂ ಸತ್ಯವನ್ನು ಮಾತ್ರ ಹೇಳಲೇ ಇಲ್ಲ.

ಬ್ರಾಹ್ಮಣನಿಗೆ ಬುದ್ಧಿ ಕೆಟ್ಟಿತು. ದೊರೆಯ ಬಳಿಗೆ ಹೋದ. "ದೊರೆಯ ತನಕ ದೂರು" ಎಂಬಂತೆ ಆಯಿತು. ಆ ದೊರೆ ಬಹಳ ಬುದ್ಧಿವಂತ. ಹೊಯ್ಸಳ ರಾಜರಲ್ಲಿ ಇವನೇ ಅಗ್ರಗಣ್ಯ. ಮಹಾ ಪರಾಕ್ರಮಿ. ಅಲ್ಲದೆ ಧರ್ಮಿಷ್ಠ. ಬ್ರಾಹ್ಮಣನ ಮಾತನ್ನು ನಿದಾನವಾಗಿ ಕೇಳಿದ. ಅವನ ಕಷ್ಟ ವನ್ನು ತಿಳಿದ. ಆಮೇಲೆ ಸೇನಾಪತಿಯನ್ನು ಕರೆಸಿ, ಮಾತನಾಡಿ, ಒಂದು ಆಜ್ಞೆ ಹೊರಡಿಸಿದ "ಯಾರ ಮನೆಯಲ್ಲಿ ಚಿನ್ನದ ಪಾತ್ರೆ ಇದ್ದರೂ, ಅವರು ಕೂಡಲೇ ರಾಜನಿಗೆ ಒಪ್ಪಿಸಬೇಕು. ಇಲ್ಲವಾದರೆ ಅತಿ ಕಠಿಣವಾದ ಶಿಕ್ಷೆ ಯನ್ನು ಅನುಭವಿಸಬೇಕಾಗುತ್ತದೆ.

ಊರಿನಲ್ಲಿದ್ದ ಎಲ್ಲ ಬಂಗಾರದ ಪಾತ್ರೆಗಳೂ ಹೊರಕ್ಕೆ ಬಂದುವು. ಆದರೆ ಸಿದ್ಧರಸ (ಆ ರಸದ ಹೆಸರು) ಇದ್ದ ಪಾತ್ರೆ ಮಾತ್ರ ಬರಲಿಲ್ಲ. ದೊರೆಗೆ ಸಿಟ್ಟು ಬಂದಿತು. ಅಷ್ಟರಲ್ಲಿ ಒಬ್ಬ ರೈತ ಓಡಿಬಂದ. ಬಂದವನೇ ಅಡ್ಡಬಿದ್ದು ಹೀಗೆಂದ:

"ಮಹಾ ಪ್ರಭೂ! ನನ್ನ ಮನೆಯಲ್ಲಿ ಯಾರೋ ನನಗೆ ತಿಳಿಯದೆ ಈ ಚಿನ್ನದ ಪಾತ್ರೆ ಇಟ್ಟಿದ್ದರು. ನನ್ನ ಹೆಂಡತಿಯನ್ನು ಕೇಳಿದೆ. ಅವಳು ಪಕ್ಕದ ಮನೆಯವರಿರಬಹುದು ಎಂದಳು. ಇದೋ ಇಲ್ಲಿದೆ" ಎಂದು ಹೇಳುತ್ತಾ ಆ ಚಿನ್ನದ ಪಾತ್ರೆಯನ್ನು ರಾಜನ ಮುಂದೆ ಇಟ್ಟನು.

ಆಗ ರಾಜನಿಗೆ ಸಂತೋಷವಾಗಿ "ನೀನಾಗಿಯೇ ತಂದಿಯಾ ಅಥವಾ ಬಲವಂತಕ್ಕಾಗಿ ತಂದಿಯಾ?" ಎಂದು ಕೇಳಿದನು. ಅವನು ಭಯದಿಂದ ನಡುಗುತ್ತಾ "ಪ್ರಭೂ, ರಾಜರ ಅಧೀನ ಪ್ರಜೆಗಳು, ತಮ್ಮ ಆಜ್ಞೆಯನ್ನು ಮೀರಿಪವರುಂಟೆ? ಮೀರಿದರೆ ಗೊತ್ತೇ ಇದೆ. ಗಡೀಪಾರು. ಆದ್ದರಿಂದ ನಾನೆಲ್ಲಿ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೋ ಎಂದು ಹೆದರಿ, ಇದನ್ನು ತಂದು ತಮ್ಮ ಪಾದಗಳಲ್ಲಿ ಅರ್ಪಿಸಿದ್ದೇನೆ. ನನ್ನನ್ನು ಮನ್ನಿಸಬೇಕು" ಎಂದು ಹೇಳಿ ದೂರ ಸರಿದನು.

ರಾಜನು ಕೂಡಲೇ ಆ ಬ್ರಾಹ್ಮಣನನ್ನು ಕರೆಯಿಸಿ "ಅಯ್ಯಾ, ವಿಷ್ಣುಶರ್ಮ ಇಲ್ಲಿ ನೋಡು. ಈ ಪಾತ್ರೆ ನಿನ್ನದೇನು?" ಎಂದು ಕೇಳಿದನು. ವಿಷ್ಣುಶರ್ಮ ಅದನ್ನು ನೋಡಿ ಹಿಗ್ಗುತ್ತಾ "ಮಹಾಸ್ವಾಮಿಯವರೇ! ಇದು ನನ್ನದೇ. ಇದನ್ನು ತಂದವನು ಪ್ರಾಮಾಣಿಕ. ಕದ್ದವನು ಆ ಕಮ್ಮಾರ. ನಾನು ಕಮ್ಮಾರನ ಅಂಗಡಿಯಲ್ಲಿ ಇಟ್ಟಮೇಲೆ, ಅವನ ಹೆಂಡತಿ ಇವನ ಮನೆಯಲ್ಲಿ ಮುಚ್ಚಿಟ್ಟಿದ್ದಾಳೆ. ನಾನು ಕೇಳಿದಾಗ ಗಂಡ ಹೆಂಡಿರಿಬ್ಬರೂ ಇಲ್ಲವೆಂದು ಸಾಧಿಸಿದರು. ಆ ಕಮ್ಮಾರ ಹೀಗೆ ಸುಳ್ಳನ್ನು ಸಾಧಿಸಬಹುದೇ? ತಮ್ಮಂತಹ ಸತ್ಯಸಂಧರೂ ಧರ್ಮನಿಷ್ಠರೂ, ಪ್ರಜೆಗಳಲ್ಲಿ ಪ್ರೀತಿಯುಳ್ಳವರೂ, ರಾಜ್ಯ ಆಳುತ್ತಿರುವಾಗ, ದೇಶದಲ್ಲಿ ಸುಳ್ಳು, ತಟವಟ, ಮೋಸ ಯಾವುವೂ ಇರಬಾರದು. ಹೀಗೆ ಇರಬೇಕಾದ ಪರಿಸ್ಥಿತಿಯಲ್ಲಿ ಆ ಕಮ್ಮಾರ ಸುಳ್ಳು ಸಾಧಿಸುವುದು ಎಂದರೇನು? ಗ್ರಾಮಗಳಲ್ಲಿ ವಾಸಿಸುವ ಹನ್ನೆರಡು ಮಂದಿ ಆಯಗಾರರು (ಬಾರಾಬಲೂತಿ) ತಮ್ಮ ತಮ್ಮ ಕೆಲಸಗಳನ್ನು ಸರಿಯಾಗಿ, ಪ್ರಾಮಾಣಿಕತೆಯಿಂದ ಮಾಡಿದ್ದೇ ಆದರೆ ಅದೇ ಸ್ವರ್ಗ. ಗ್ರಾಮಕ್ಕೆ ನಾಯಕ ಗೌಡ ಅಥವಾ ಪಟೇಲ. ಲೆಕ್ಕಪತ್ರಗಳಿಗೆ ಆಧಾರಿ ಶ್ಯಾನುಭೋಗ. ಗ್ರಾಮಕ್ಕೂ ಹೊಲಗದ್ದೆಗಳಿಗೂ ಕಾವಲು ತೋಟಿ ತಳವಾರ. ಗದ್ದೆಗೆ ನೀರು ಬಿಡುವವನು ನೀರುಗಂಟಿ. ಬೇಸಾಯಗಾರನಿಗೆ ಬುದ್ಧಿ ಹೇಳುವವನು ಜೋಯಿಸ. ರೈತರಿಗೆ ಉಪಕಾರಿ ಬಡಗಿ ಕಮ್ಮಾರ. ರೈತನ ಜೀವನದಲ್ಲಿ ಆಗಾಗ್ಗೆ ಬೇಕಾದವರೆಂದರೆ ಕುಂಬಾರ, ಅಗಸ, ಅಕ್ಕಸಾಲೆ ಮತ್ತು ನಾಯಿಂದ. ಇಷ್ಟಲ್ಲದೆ ಕೆಲವು ಹಳ್ಳಿಗಳಲ್ಲಿ ಕವಿಗಳೂ ಇರುತ್ತಾರೆ. ಹೀಗೆ ಗ್ರಾಮಗಳ ಬಾಳು ಈ ಹನ್ನೆರಡು ಜನರನ್ನೇ ಅವಲಂಬಿಸಿದೆ. ಇವರಲ್ಲಿ ಯಾರು ಹಿಂದಾದರೂ ಗ್ರಾಮಗಳು ಏಳಿಗೆಗೆ ಬರಲಾರವು. ಪ್ರಭೂ! ಮೊದಲು ಅವರು ಪ್ರಾಮಾಣಿಕರಾಗಿರಬೇಕು. ಯಾರಾದರೂ ಬಂಗಾರದ ಪದಕವನ್ನೋ ಬೆಳ್ಳಿಯ ಬಳೆಯನ್ನೋ ಅಕ್ಕಸಾಲೆಗೆ ಕೊಟ್ಟರೆ, ಅವನು ಅದನ್ನೇ ಮಾರಿಕೊಂಡರೆ ಇನ್ನು ಹಳ್ಳಿಯಲ್ಲಿ ಸತ್ಯವೆಲ್ಲಿಯದು. ಒಗ್ಗಟ್ಟು ಉಂಟಾದೀತೆ! ಕೂಡಲೇ ಜಗಳ ಹತ್ತಿ ಪ್ರಾಣಗಳನ್ನು ಕಳೆದುಕೊಳ್ಳುವರು. ಆದ್ದರಿಂದ ಗ್ರಾಮಗಳವರು ಇನ್ನಾದರೂ ನೀತಿ ಕಲಿಯಲಿ. ತಮ್ಮ ತಮ್ಮ ಕಾರ್ಯಗಳನ್ನು ನಿರ್ವಂಚನೆಯಿಂದ

ಮಾಡಲಿ. ಧರ್ಮವನ್ನು ಬಿಟ್ಟು ಅಧರ್ಮಕ್ಕೆ ಮನಗೊಡಬಾರದು. ಆ ಕಮ್ಮಾರನಿಗೆ ಶಿಕ್ಷೆಯನ್ನು ವಿಧಿಸಿರಿ. ಈ ಪಾತ್ರೆಯನ್ನು ತಂದಾತನಿಗೆ ಬಹುಮಾನವನ್ನು ದಯಪಾಲಿಸಿರಿ" ಎಂದು ಹೇಳಿ ತನ್ನ ಆಸನದಲ್ಲಿ ಕುಳಿತನು.

ರಾಜನು ಬಹಳ ಸಂತೋಷಗೊಂಡು. "ಅಯ್ಯಾ ಬ್ರಾಹ್ಮಣನೇ! ನಿನ್ನ ಸಲಹೆಯಂತೆಯೇ ನಾನೀಗ ಆಜ್ಞೆ ಕೊಡುತ್ತೇನೆ. ಅದಿರಲಿ. ನೀನು ಈಶ್ವರನನ್ನು ಕುರಿತು ತಪಸ್ಸುಮಾಡಿ, ಈ ಸಿದ್ಧರಸವನ್ನು ಏಕೆ ತಂದೆ?" ಎಂದು ಕೇಳಿದ. ವಿಷ್ಣುಶರ್ಮನು "ಮಹಾಸ್ವಾಮಿಯವರಿಗೆ ಕೊಡುವುದಕ್ಕಾಗಿ" ಎಂದ. ರಾಜ "ನನಗೇಕೆ. ನೀನು ಬಡವ ನಿನ್ನಲ್ಲಿರಬೇಕು" ಎಂದ. ವಿಷ್ಣುಶರ್ಮ ನಾನೇನೋ ಬಡವ. ಆದರೆ ಇದರಿಂದ ದೊರೆಯುವ ಬಂಗಾರವನ್ನು ನಾನು ಕಾಪಾಡಲಾರೆ. ಈ ಪಾತ್ರೆಯನ್ನು ಕಾಪಾಡಿಕೊಳ್ಳುವುದಕ್ಕೆ ಶಕ್ತಿಯಿಲ್ಲವೆ, ತಮ್ಮಲ್ಲಿಗೆ ಬರಬೇಕಾಯಿತು" ಎಂದ.

ರಾಜನು ನಗುತ್ತಾ "ಓಹೋ ಸರಿ ಹಾಗಾದರೆ ಈ ಪಾತ್ರೆ ನನಗೇ ಇರಲಿ. ನಿನಗೆ ಒಂದು ಗ್ರಾಮವನ್ನೇ ಕೊಡುತ್ತೇನೆ" ಎನ್ನುತ್ತಾ ಅಧಿಕಾರಿಯೊಬ್ಬನನ್ನು ಕರೆದು "ಕೂಡಲೇ ಈತನಿಗೆ ಒಂದು ಗ್ರಾಮವನ್ನು ಕೊಡುವ ಏರ್ಪಾಟು ಮಾಡಿರಿ" ಎಂದು ಆಜ್ಞಾಪಿಸಿದ.

ವಿಷ್ಣುಶರ್ಮನು ದೊರೆಗೆ ಆಶೀರ್ವದಿಸಿ "ಮಹಾರಾಜಾ, ನಾನು ತಮಗೆ ಕೃತಜ್ಞ" ಎಂದು ಹೇಳಿ ಹೊರಟುಹೋದ.

ಅನಂತರ ದೊರೆಯು ಈ ಪವಿತ್ರ ಪಾತ್ರೆಯನ್ನು ಪದ್ಮಾವತೀ ಅಮ್ಮನವರ ದೇವಸ್ಥಾನದಲ್ಲಿರಿಸಿ, ತನಗೆ ಅವಶ್ಯಕವಾದಾಗ ಒಂದು ತೊಟ್ಟು ರಸವನ್ನು ಕಬ್ಬಿಣದ ತುಂಡಿನ ಮೇಲೆ ಹಾಕಿ ಚಿನ್ನವನ್ನು ಪಡೆಯುತ್ತಿದ್ದನು.

ಹೀಗಿರುವಾಗ ಒಂದು ದಿನ ಅವನಿಗೆ ಒಂದು ವಿಷಯ ಹೊಳೆಯಿತು. "ನನ್ನ ರಾಜ್ಯದಲ್ಲಿ ಸಾಗುವಳಿ ಇಲ್ಲದ ಬೀಡು ಜಮೀನು ಬೇಕಾದಷ್ಟಿದೆ. ಅವನ್ನೇಕೆ ಉಪಯೋಗಿಸಬಾರದು? ರೈತರಿಗೆ ಕಂದಾಯದ ಭಯವೇ ಭಯ. ಅದನ್ನು ತಪ್ಪಿಸಿಬಿಟ್ಟರೆ ಎಷ್ಟು ಜಮೀನು ಬೇಕಾದರೂ ಉಳುತ್ತಾರೆ. ಆದ್ದರಿಂದ ಕಂದಾಯವನ್ನು ಮೊದಲು ಕಿತ್ತುಹಾಕಬೇಕು."

ಇನ್ನು ಸ್ವಲ್ಪಹೊತ್ತು ಕಳೆಯಿತು. ರಾಜನು ಇದ್ದಕ್ಕಿದ್ದಹಾಗೆಯೇ

"ಹೊಳೆಯಿತು! ಹೊಳೆಯಿತು!" ಎಂದು ಕೂಗಾಡಿದನು: ಅವನಿಗೆ ಹೊಳೆದದ್ದೇನು? "ರೈತರೆಲ್ಲಾ ದುಡ್ಡು ಅಥವಾ ಹಣ ಕೊಡುವುದರ ಬದಲು ನೇಗಲಿನ ಗುಳಗಳನ್ನು ಕೊಡಲಿ ಸಾಕು ನನಗೆ" ಎಂದು.

ಈ ಮಾತು ಕೇಳಿ ಜಾನಕಿಯು "ತಾತಾ, ಕುಳ ಅಂದನಲ್ಲಾ ಸುಬ್ಬಣ್ಣ ನೀನು ಗುಳ ಎನ್ನುತ್ತೀಯೆ" ಎಂದಳು. ತಾತನು "ಸ್ವಲ್ಪ ಸುಮ್ಮನೆ ಇರಮ್ಮಾ ಪೂರ್ತಿ ಕತೆ ಕೇಳು ಆಮೇಲೆ ತಿಳಿಯುತ್ತೆ" ಎಂದು ಹೇಳಿ ಮುಂದುವರಿಸಿದ. ನಾವೆಲ್ಲಾ ಕಿವಿಗಳನ್ನು ಹಾಗೆಯೇ ತೆರೆದು ಕೊಂಡು ಕುಳಿತಿದ್ದೆವು.

ಆಮೇಲೆ ವಿಷ್ಣುವರ್ಧನ ತನ್ನ ರಾಜಧಾನಿಯಾದ ಹಳೇಬೀಡು (ದ್ವಾರಸಮುದ್ರ) ಊರನ್ನೆಲ್ಲಾ ಸುತ್ತಾಡಿದ. ಊರ ಒಳಕ್ಕೂ ಹೊರಕ್ಕೂ ಸುತ್ತಾಡಿ ಬಂದ. ಕುದುರೆಗೆ ಆಯಾಸವಾದರೂ ರಾಜನಿಗೆ ಆಯಾಸವೇ ಆಗಲಿಲ್ಲವಂತೆ. ಅಷ್ಟು ಅಭಿರುಚಿ ರಾಜನಿಗೆ. ಪುನಃ ಅರಮನೆಯಲ್ಲಿ ಕುಳಿತು ಮಂತ್ರಿಗೆ ಹೇಳಿ ಕಳುಹಿಸಿದ. ಮಂತ್ರಿಯೂ ಬಂದನು. ನಮಸ್ಕಾರ ಮೊದಲಾದ್ದೆಲ್ಲಾ ಆದಮೇಲೆ ರಾಜನು ಹೇಳಿದ. "ಮಂತ್ರಿಗಳೇ ನೀವು ಕೂಡಲೇ ಆಜ್ಞೆ ಹೊರಡಿಸಬೇಕು. ಪ್ರತಿಯೊಬ್ಬ ರೈತನೂ ತಾನೆಷ್ಟು ಭೂಮಿ ಬೇಕಾದರೂ ಸಾಗುವಳಿ ಮಾಡಬಹುದು. ಆದರೆ ಅವನು ಸರ್ಕಾರಕ್ಕೆ ಕಂದಾಯವನ್ನು ಹಣದ ರೂಪವಲ್ಲಿ ಕೊಡಬೇಕಾದ್ದಿಲ್ಲ, ವರ್ಷ ಕ್ಕೊಂದು ಸಲ ನೇಗಲಿನ ಸವೆದುಹೋದ ಗುಳಗಳನ್ನು ಅರಮನೆಗೆ ತಂದು ಒಪ್ಪಿಸಬೇಕು" ಎಂದನು.

ಮಂತ್ರಿಗೆ ಆಶ್ಚರ್ಯವಾಯಿತು. "ಸ್ವಾಮಿಯವರಲ್ಲಿ ಒಂದು ಅರಿಕೆ" ಎಂದ. ರಾಜನು 'ಏನು' ಎನಲು, ಮಂತ್ರಿಯು ಹೀಗೆಂದ: "ತಮಗೆ ಸವೆದು ಹೋದ ಗುಳಗಳಿಂದ ಏನು ಪ್ರಯೋಜನ?" ರಾಜನ ಉತ್ತರ: ಪ್ರಯೋ ಜನವೇ.... ಬೇಕಾದಷ್ಟಿದೆ. ನನ್ನ ಹತ್ತಿರ ಒಂದು ವಿಧವಾದ ರಸವಿದೆ. ಅದರ ಹೆಸರು ಸಿದ್ಧರಸ. ಅದನ್ನು ಕಬ್ಬಿಣದ ಮೇಲೆ ಹಾಕಿದರೆ ಚಿನ್ನ ವಾಗುತ್ತದೆ. ಅದು ಈಶ್ವರನ ಕೃಪೆಯಿಂದ ಇಲ್ಲಿಗೆ ಬಂದಿದೆ."

"ಹಾಗೇನು! ಸರಿ, ಆಗಲಿ, ಆಜ್ಞೆಯನ್ನು ಒಡನೆಯೇ ಹೊರಡಿಸು ವೆನು" ಎಂದು ಹೇಳಿ ಹೊರಟುಹೋದ.

ಈಗ ರೈತರಿಗೂ ಸಂತೋಷ. ಬೇಕಾದಷ್ಟು ಬೀಡುಜಮೀನು ಸಾಗುವಳಿಗೆ ಬಂತು. ವರ್ಷ ಮುಗಿಯುತ್ತಲೇ ಸಾವಿರಾರು ಗುಳಗಳು ಅರಮನೆಯಲ್ಲಿ ಬಂದುಬಿದ್ದುವು. ರಾಜ ಅವನ್ನೆಲ್ಲಾ ಬಂಗಾರ ಮಾಡಿಕೊಳ್ಳುತ್ತಿದ್ದ. ಹೀಗೆ ಗುಳವನ್ನು ತರುವ ರೈತರನ್ನು ಅರಮನೆಯ ಅಧಿಕಾರಿಗಳು ಬಳಕೆಯಲ್ಲಿ 'ಕುಳ' ಎಂದು ಕರೆದರು. ಆ ಹೆಸರೇ ಈಗಲೂ ಬಳಕೆಯಲ್ಲಿದೆ. ಗುಳವನ್ನು ಅಥವಾ ಕಂದಾಯವನ್ನು ಕೊಡುವಾತನೇ ಕುಳ. ಅವನು ಕೊಡುವ ವಸ್ತುವೇ ಕುಳವಾಣ.

ಂ ಂ ಂ ಂ

ಈ ಕತೆ ಕೇಳಿ ಜಾನಕಿ ನಕ್ಕಳು. ನನಗೂ ನಗು ಬಂದಿತು. ತಾತನೂ ನಗುತ್ತಾ ನಶ್ಯವನ್ನೇರಿಸಿದ. ಸುಬ್ಬಣ್ಣ "ಏನು ರಾಮಣ್ಣ, ನನಗೆ ಇಷ್ಟು ವರ್ಷಗಳಾದರೂ ಈ ವಿಷಯ ತಿಳಿದೇ ಇರಲಿಲ್ಲವೇ? 'ಕುಳ, ಕುಳ' ಎಂದೇನೋ ಹೇಳುತ್ತೇನೆ, ಆದರೆ ಅದರ ಕಥೆ ತಿಳಿದಿರಲಿಲ್ಲ. ಎಂಥ ದಡ್ಡ ನಾನು" ಎಂದ.

ನಾನು "ತಾತ, ಇನ್ನೊಂದು ಕತೆ" ಎಂದೆ. ಜಾನಕಿಯಂತೂ ಸ್ವಲ್ಪವೂ ಬೇಸರಪಡದೆ "ಅಕ್ಕನಿಗೆ ಹೇಳಿದೆ ಈಗ ನನಗೆ ಇನ್ನೊಂದು ಹೇಳು" ಎಂದು ಕೇಳಿಕೊಂಡಳು. ನಮ್ಮ ತಾತನು "ಕತೆ ಬೇಕೆ ಕಥೆ" ಎಂದು ಹೇಳುತ್ತಿರುವಷ್ಟರಲ್ಲಿ ಇದ್ದಕ್ಕಿದ್ದ ಹಾಗೆ ಒಂದು ಹಾವು ಕಾಣಿಸಿತು. ನಮ್ಮ ತಾತ "ಶಾರದೆ, ಜಾನಕಿ ನಡೆಯಿರಿ ಮನೆಗೆ. ಹಾವು ಬಂದಿದೆ ಹಾವು!" ಎಂದು ಹೇಳಿದ. ನಾವು ಒಂದೇ ಒಂದು ನಿಮಿಷದಲ್ಲಿ ಮನೆಗೆ ಓಡಿದೆವು. ನಮ್ಮ ತಾತ, ಸುಬ್ಬಣ್ಣ ಮಾತ್ರ ಅಲ್ಲೇ ಇದ್ದರು.

ಹಾವನ್ನು ಹೊಡೆದರೋ ಇಲ್ಲವೋ ಗೊತ್ತಿಲ್ಲ.



# ಮೈಮೇಲೆ ಬಂದ ದೇವಿ

—::—

ಚಾಮುಂಡಿ, ದುರ್ಗಿ, ಕಾಳಿ, ಶಂಕರಿ, ಮಾರಿ ಮೊದಲಾದ ದೇವಿಗಳಿಗೂ: ಆಂಜನೇಯ, ವಲ್ಲಭರಾಯ, ನರಸಿಂಹ ಮೊದಲಾದ ದೇವರುಗಳಿಗೂ ನಮ್ಮೂರಲ್ಲಿ ಏನೂ ಕೊರತೆಯಿಲ್ಲ. ಇಲ್ಲೊಂದು ಶಂಕರಿ ದೇವಾಲಯ ಬಹುಕಾಲದಿಂದಲೂ ಇದೆ. ಅದನ್ನು ಕಟ್ಟಿಸಿದವರು ಯಾರೆಂಬುದೇ ಗೊತ್ತಿಲ್ಲ. ಪ್ರತಿ ಶನಿವಾರ ಅಭಿಷೇಕ, ಶುಕ್ರವಾರ ಆರತಿ, ಸೋಮವಾರ ಮೆರವಣಿಗೆ ಹೀಗೆಲ್ಲಾ ಉತ್ಸವಗಳು ವಿಜೃಂಭಣೆಯಿಂದ ಆಗುತ್ತಲೇ ಇರುತ್ತವೆ.

ಒಂದು ದಿನ ನಾನೂ, ನನ್ನ ಸ್ನೇಹಿತರೂ ದೇವಿಯ ದರ್ಶನಕ್ಕಾಗಿ ಹೊರಟೆವು. ಪುಣ್ಯಾತ್ಮರೊಬ್ಬರು ಸೊಗಸಾದ ಕುದುರೆಗಾಡಿ ನಮ್ಮ ವಶಕ್ಕೆ ಕೊಟ್ಟಿದ್ದರು. ನಾವು ನಾಲ್ಕು ತೆಂಗಿನಕಾಯಿ, ಎರಡು ಮೂರು ಕುಚ್ಚು ಹೂವು, ಕರ್ಪೂರ ಮೊದಲಾದುವನ್ನು ತೆಗೆದುಕೊಂಡೇ ಹೊರಟಿದ್ದೆವು. ಅಂದು ನಮ್ಮ ಅದೃಷ್ಟಕ್ಕೆ ಸರಿಯಾಗಿ ಅಲ್ಲಿ ಸಂಗೀತ ಕಛೇರಿ. ನಾವೂ ಸಂಗೀತದಲ್ಲಿ ಮಗ್ನರಾದೆವು. ಸುಮಾರು ಒಂದು ಗಂಟೆ ಬಹು ಹರ್ಷವಾಗಿ ಸಾಗಿಹೋಯಿತು. ಒಂದು ಚಿಕ್ಕಮಗು ಬಹು ಇಂಪಾಗಿ ಹಾಡುತ್ತಿತ್ತು. ಆ ಮಗು ಹಾಡುತ್ತಿದ್ದರೆ ನಮಗೆಲ್ಲಾ ನಾಚಿಕೆಯಾಗುತ್ತಿತ್ತು.

ಸಂಗೀತದ ಸವಿಯನ್ನು ಉಣಬಯಸುವ ಹಲವು ಭಕ್ತಾದಿಗಳು ಅಲ್ಲಿಯೇ ಇದ್ದುಬಿಡುವಂತೆ ಕಂಡಿತು. ನಾವು ಎಚ್ಚರಗೊಂಡೆವು. ಅಡಿಗೆ ಸಡಗರ ಸ್ವಲ್ಪ ಸ್ವಲ್ಪ ನಮ್ಮ ದೃಷ್ಟಿಗೂ ಬಿತ್ತು. ದೇವಾಲಯದ ಪೂಜಾರಿಯನ್ನು ಕುರಿತು, "ದಯವಿಟ್ಟು ಮಂಗಳಾರತಿ ಮಾಡಿ, ನಮಗೆ ದೇವಿ ಪ್ರಸಾದ ಕೊಟ್ಟರೆ ನಾವು ಹೋಗುತ್ತೇವೆ" ಎಂದೆವು. ಆತನು "ಸ್ವಲ್ಪ ನಿಲ್ಲಿ, ಇನ್ನು ಹತ್ತೇ ನಿಮಿಷ" ಎಂದನು.

ಇನ್ನೇನು ಸಂಗೀತ ಕಛೇರಿ ಮುಗಿಯಿತು ಎನ್ನುವಷ್ಟರಲ್ಲಿ ದೇವಾಲಯದ ಸ್ವರೂಪವೇ ಬದಲಾಯಿಸಿತು. ಇದ್ದಕ್ಕಿದ್ದ ಹಾಗೇ ಹೆಂಗಸರು

ದೇವಸ್ಥಾನವನ್ನು ಬಿಟ್ಟು ಹೊರಕ್ಕೆ ಹೊರಟರು. ಹುಡುಗರು ಅಳಲು ಆರಂಭಿಸಿದರು. ನಮಗೂ ಭಯವು ಆವರಿಸಿತು. ಸಂಗೀತ ಸದ್ದಿಲ್ಲದೆ ನಿಂತಿತು. ಹೊರಗಡೆ ನಿಂತಿದ್ದ ಜನರೆಲ್ಲ ಓಡಿದರು. ನಾನು ಇದೇನು ಎನ್ನುತ್ತಾ ಗುಂಪಿನ ನಡುವೆ ತೂರಿ, ದೇವರ ಕಡೆಗೆ ನೋಡಿದೆ. ದೇವಿಯ ಪಕ್ಕದಲ್ಲಿ ಒಂದು ವಿಚಿತ್ರ ವ್ಯಕ್ತಿ. ಅದರ ಬಾಯಲ್ಲಿ ರಕ್ತ, ನಾಲಗೆ ಜೋಲು ಬಿದ್ದಿದೆ. ನಾಲಗೆಯ ಮೇಲೆ ಕರ್ಪೂರ ಹತ್ತಿಸಿದರೂ ಆ ವ್ಯಕ್ತಿ ಚಲಿಸಲೇ ಇಲ್ಲ. ನಾನು ಅದನ್ನೇ ನೋಡುತ್ತಿರುವಲ್ಲಿ ಹಿಂದೆ ಒಂದು ಘರ್ಜನೆ ಕೇಳಿಸಿತು. ಎದೆಯೊಡೆದುಹೋಯಿತು. ಮಿಲಿಟರಿಯಲ್ಲಿನ ಸಿಪಾಯಿಯು ನಾಯಕನ ಆಜ್ಞೆ ಕೇಳುತ್ತಲೇ ಥಟ್ಟನೆ ಹಿಂದಕ್ಕೆ ತಿರುಗುವಂತೆ ನಾನೂ ತಿರುಗಿದೆ. ಮತ್ತೊಂದು ವ್ಯಕ್ತಿ : ಹಾಗೆಯೇ ಕಣ್ಣಲ್ಲಿ ಕಣ್ಣಿಟ್ಟು ನೋಡಿದೆ. ದೇವಸ್ಥಾನದ ಪೂಜಾರಿಯೇ 'ಹ್ರಾಂ, ಹ್ರೀಂ' ಎಂದು ಮುಂತಾಗಿ ಆರ್ಭಟ ಧ್ವನಿಗಳು ಗುಡುಗಿದುವು. ಇಂತಹ ಅವಾಂತರದಲ್ಲಿ ಯಾವ ಹೆಂಗಸು ತಾನೆ ಇದ್ದಾಳು?

ರಾತ್ರಿ ಏರಿತು : ಗಂಟೆ ಏಳಾಯಿತು, ಎಂಟಾಯಿತು. ಎರಡು ವ್ಯಕ್ತಿಗಳೂ ಅತ್ತಿತ್ತ ಓಡಾಡುತ್ತ, ಆರ್ಭಟಿಸುತ್ತ, ನಾಟ್ಯವಾಡುತ್ತಲಿವೆ. ಇವುಗಳನ್ನಡಗಿಸಲು ಯಾರಿಗೂ ಧೈರ್ಯವಿರಲಿಲ್ಲ. ಈ ಎರಡು ವ್ಯಕ್ತಿಗಳ ಮಧ್ಯೆ ಇದ್ದಕ್ಕಿದ್ದ ಹಾಗೆ ಒಂದು ಸ್ತ್ರೀವ್ಯಕ್ತಿ ಎದ್ದಿತು. ಈಕೆ ಯಾರು? ಎಂದು ಎಲ್ಲರೂ ಕುತೂಹಲದಿಂದ ತವಕಪಟ್ಟರು. ಆಕೆ ಯಾರೋ ಹೊಸಬಳೆಂದೂ, ಆದೇವಾಲಯಕ್ಕೆ ಆ ದಿನವೇ ಬಂದಿದ್ದಳೆಂದೂ ತಿಳಿಯಿತು. ಆ ಎರಡು ಪುರುಷವ್ಯಕ್ತಿಗಳು ಸಿಂಹದಂತೆ ಆರ್ಭಟಿಸುತ್ತಿದ್ದರೆ, ಈ ಸ್ತ್ರೀವ್ಯಕ್ತಿ ಬಾಯಿ ಬಿಡದೆ ಕಣ್ಣಿನಲ್ಲೇ ಸಂಜ್ಞೆ ಮಾಡುತ್ತಿತ್ತು.

ಈ ಸ್ತ್ರೀವ್ಯಕ್ತಿ ಬಹುಶಃ ಸೊಗಸಾದ ನಟಿಯಿರಬೇಕು. ಇವಳ ನಾಟ್ಯವು ಬಹು ರಮ್ಯವಾಗಿತ್ತು. ಚೆಲ್ಲಾಪಿಲ್ಲಿಯಾಗಿ ನೆರೆದಿದ್ದ ಸಭಿಕ ವೃಂದವು ಇವಳ ನಾಟ್ಯಕ್ಕೆ ಬೆರಗಾಯಿತು. ನಿಜವಾಗಿಯೂ ಸಮಸ್ತರನ್ನೂ ಸೂರೆಗೊಂಡಳು ದೇವಿ. ಆದರೆ?

ಒಂದೆರಡು ನಿಮಿಷಗಳಲ್ಲಿ ಪುರುಷವ್ಯಕ್ತಿಗಳಲ್ಲಿ ಕಲಹ ಹುಟ್ಟಿತು. ಒಂದು ಹೇಳಿತು "ನಾನು ಯಾರು ಬಲ್ಲೆಯೋ? ನಾನೇ ಆ ವೀರ ನರಸಿಂಹ!"

ಇನ್ನೊಂದು "ವೀರನರಸಿಂಹನನ್ನು ಸದೆಬಡಿಯುವ ಹನುಮಂತ ಯಾರು ಗೊತ್ತೇ? ನಾನೇ; ತಿಳಿಯಿತೊ?"

'ಛೆ, ಛೆ, ಮುಚ್ಚು ಬಾಯಿ. ನಾನು ಚಿಕ್ಕಂದಿನಿಂದಲೂ ನರಸಿಂಹನ ಸೇವೆಮಾಡಿ ಅವನನ್ನು ಒಲಿಸಿಕೊಂಡು, ಬೇಕಾದವರಿಗೆ ಬೇಕಾದ ವರವನ್ನು ಕೊಟ್ಟಿದ್ದೇನೆ. ನೀನು ತಪ್ಪನ್ನು ಒಪ್ಪಿಕೊಂಡು ಬೇಕಾದ್ದನ್ನು ಕೇಳು, ಕೊಡುತ್ತೇನೆ."

"ವರವನ್ನು ಕೇಳಲು ನಾನೇನು ಮೂರ್ಖನಲ್ಲ. ಬಿಡು ನಿನ್ನ ಈ ಮಾತನ್ನು. ನನ್ನ ಮಾತಿನಂತೆ ನೀನು ಬಂದರೆ ಸರಿ, ಇಲ್ಲವಾದರೆ ಲಂಕೆ ಯನ್ನು ಸುಟ್ಟಂತೆ ನಿನ್ನನ್ನು ಸುಟ್ಟು ಭಸ್ಮಮಾಡಿಬಿಟ್ಟೇನು!"

"ಇರಲಿ, ನಾನು ಕಂಡಿದ್ದೇನೆ. ನೀನು ಆಂಜನೇಯನಾದರೆ ಬ್ರಹ್ಮ ಚಾರಿಯಾಗಿದ್ದೀಯೇನು?"

"ಹೌದು. ನಾನು ಚಿಕ್ಕಂದಿನಿಂದಲೂ ಬ್ರಹ್ಮಚಾರಿಯೇ!"

"ಅದಕ್ಕೇ ನಿನಗೆ ಎರಡು ಮಕ್ಕಳು. ಮದುವೆಯಾದ ಹೆಂಡತಿಯನ್ನು ಓಡಿಸಿ, ಪರಸ್ತ್ರೀಯಲ್ಲಿ ಬಿದ್ದು, ಇಲ್ಲಿಗೆ ಬಂದು, ಈ ದೇವಸ್ಥಾನದ ಕೀರ್ತಿಗೆ ಧಕ್ಕೆ ತರುತ್ತಿರುವೆ. ಇಂದಿಗಾಯಿತು. ಇನ್ನು ಮುಂದೆ ಇಲ್ಲಿಗೆ ಬರಬೇಡ, ತಿಳಿಯಿತೆ?"

"ಓಹೋ! ನೀನು ನರಸಿಂಹನೋ, ನಿನ್ನ ಕೇಸರವೆಲ್ಲಿ? ಅಲ್ಲದೆ ಈ ಶಂಕರಿದೇವಿಯ ಬಳಿ ನಿನಗೇನು ಕೆಲಸ? ದೇವಿಯ ಆಲಯಕ್ಕೆ ಕಾಲಿಟ್ಟದ್ದೇ ನಿನ್ನ ಅಪರಾಧ. ನಾನು ದೇವಿಯ ಭಂಟ. ನೀನು ಇಲ್ಲಿಗೆ ಬರಲು ಕಾರಣವಿಲ್ಲ. ಮೊದಲು ತೊಲಗು. ಇಲ್ಲವಾದರೆ ಭಸ್ಮಮಾಡಿ ಬಿಡುತ್ತೇನೆ."

"ಹ್ರಾಂ, ಹ್ರೀಂ, ಇದೋ ತಿಂದುಬಿಟ್ಟೆ" ಎನ್ನುತ್ತಾ ನರಸಿಂಹನು ಹನುಮಂತನ ಮೇಲೆ ಬಿದ್ದ. ಇಬ್ಬರೂ ಉರುಳಿದರು.

ಆಂಜನೇಯನ ಮೈಯೆಲ್ಲಾ ಗಾಯವಾಗಿ ರಕ್ತ ಹರಿಯತೊಡ ಗಿತು. ವೀರನರಸಿಂಹ ಮೇಲೆದ್ದು, ಒಂದು ತೆಂಗಿನಕಾಯಿ ತೆಗೆದುಕೊಂಡು, ತನ್ನ ತಲೆಯ ಮೇಲೆ ಇಟ್ಟು ಒಡೆದು, ಎರಡು ಒಪ್ಪುಮಾಡಿದ. ಎಲ್ಲರೂ ಅಚ್ಚರಿಗೊಂಡರು. ಆಂಜನೇಯ ಸೊರಗುತ್ತಾ ಮೇಲೆದ್ದು ಪರಾರಿ ಯಾದ. ನರಸಿಂಹ ಸುಮ್ಮನಿರದೆ "ಅವನು ಕ್ಷಮಾಪಣೆ ಬೇಡಬೇಕು"

ಎಂದು ಅರಚಿದ. ಜನರೆಲ್ಲಾ ಸಮಾಧಾನಪಡಿಸಿದರು. ನರಸಿಂಹನ ಸೊಕ್ಕು ಇಳಿಯಿತು.

ಆದರೆ ದೇವಿ ಸುಮ್ಮನಾಗಲಿಲ್ಲ. ಆ ಸ್ತ್ರೀವ್ಯಕ್ತಿ ಶಂಕರೀದೇವಿಯ ಮುಂಪೆ ಅಭಿನಯಿಸುತ್ತಿತ್ತು. ಹೂ, ಗಂಧ, ವೀಳೆಯದೆಲೆ ಇವುಗಳನ್ನು ತೆಗೆದುಕೊಳ್ಳಲು ಕಣ್ಣಿಂದಲೇ ಸಂಜ್ಞೆಮಾಡಿ, ಅವುಗಳನ್ನು ಪಡೆದು, ನೆಗೆಯುತ್ತ ಹೋಗಿ, ದೇವಿಯ ಪೀಠದಲ್ಲಿ ಅರ್ಪಿಸಿದ್ದಾಯಿತು. ಎಲ್ಲರೂ ಈ ದೃಶ್ಯವನ್ನೇ ನೋಡುತ್ತಿದ್ದರು. ಕೆಲವರು "ಈಕೆ ನಿಜವಾಗಿಯೂ ಭಕ್ತಳು. ಇವಳು ಇಂದು ಬಾರದೇ ಇದ್ದಿದ್ದರೆ, ಈ ಇಬ್ಬರೂ ಹೊಡೆದಾಡಿ ಸತ್ತೇ ಹೋಗುತ್ತಿದ್ದರು. ನೋಡಿದಿರಾ! ಇವಳ ಭಕ್ತಿ! ಇವಳ ಮೇಲೆ ನಿಜವಾಗಿಯೂ ದೇವಿ ಬಂದಿದ್ದಾಳೆ. ಏನಾದರೂ ಪ್ರಶ್ನೆ ಕೇಳಬೇಕು" ಎಂದು ಮಾತನಾಡುತ್ತಿದ್ದರು. ಇನ್ನು ಕೆಲವರು "ಇವಳಿಗ್ಲ್ಲೋ ಹುಚ್ಚು, ತಲೆ ಕೆಟ್ಟುಹೋಗಿದೆ. ಸಿಕ್ಕಾಪಟ್ಟೆ ಕುಣಿಯುತ್ತಾಳೆ" ಎಂದು ಹೇಳುತ್ತಿದ್ದರು. ಅಷ್ಟರಲ್ಲಿ ಒಬ್ಬ ಮುದುಕಿ ಬಂದಳು. ಬಂದವಳೇ "ಅಪ್ಪಾ ಯಾರಾದರೂ ದೇವಿಗೆ ಕೈಮುಗಿದು ಬೇಡಿಕೊಳ್ಳಿರಪ್ಪಾ, ದೇವಿ ಬಂದು ಬಹಳ ಹೊತ್ತಾಯಿತು. ಯಾರಾದರೂ ಪ್ರಶ್ನೆಹಾಕಿ ಸರಿಯಾದ ಉತ್ತರ ಹೇಳ್ತಾಳೆ. ಮಕ್ಕಳಾಗುವ ವಿಚಾರ, ಕೋರ್ಟಿನಲ್ಲಿ ಗೆಲವು ಆಗುವ ವಿಚಾರ ಎಲ್ಲವನ್ನೂ ಹೇಳ್ತಾಳೆ" ಎಂದಳು.

ಅವರಿವರು ದೇವಿಯ ಸುತ್ತಾ ಸೇರಿದರು. "ಅಮ್ಮಾ, ದೇವಿ! ಏಕಮ್ಮಾ ಹೀಗೆ ಮಾಡುತ್ತಿ? ಏನು ಅಪಚಾರ ನಡೆಯಿತು ಇಲ್ಲಿ? ಹೇಳಮ್ಮಾ ನಮ್ಮ ಅಪರಾಧ ಏನಿದ್ದರೂ ಕ್ಷಮಿಸು ತಾಯಿ. ನಿನಗೆ ಕಾಯಿ, ಹಣ್ಣು, ಹೂ ಎಲ್ಲಾ ಅರ್ಪಿಸುತ್ತೇವೆ. ಶಾಂತಳಾಗು ದೇವಿ, ಪ್ರಸನ್ನಳಾಗು" ಎಂದು ಮುಂತಾಗಿ ನುಡಿದರು. ದೇವಿಯು ಉತ್ತರಕೊಟ್ಟಿತು. "ನನ್ನನ್ನು ಈ ಮಹಾಶಂಕರಿ ಕರೆದಳು. ಅದಕ್ಕಾಗಿ ಇಲ್ಲಿ ಬಂದೆ. ನಾನೇ ಅವಳು. ಈ ದೇವಸ್ಥಾನದ ಯಜಮಾನರಿಗೆ ಈ ಸಲ ರಾಜಮರ್ಯಾದೆ ಸಿಗುತ್ತೆ. ಅಲ್ಲದೆ ಅವರಿಗೆ ಒಂದು ಗಂಡು ಮಗುವೂ ಆಗುತ್ತೆ. ಈ ದೇವಸ್ಥಾನಕ್ಕೆ ಯಾರೋ ವ್ಯಭಿಚಾರಿ ಬಂದುಬಿಟ್ಟಿದ್ದಾಳೆ. ಅವಳಿಂದ ಬಹುಮಂದಿ ಕೆಡುತ್ತಿದ್ದಾರೆ. ದೇವಾಲಯಕ್ಕೆ ಬರಬೇಕಾದರೆ ಭಕ್ತಿಯಿರಬೇಕು ಅಲ್ಲವೆ?"

ಆ ಮುದುಕಿ "ಅಮ್ಮಾ ಇನ್ನೇನಿದ್ದರೂ ಹೇಳಿಬಿಡು" ಎಂದಳು.

ದೇವಿ ನುಡಿಯಿತು "ಈ ಗ್ರಾಮದ ಶ್ಯಾನುಭೋಗ ಓಟು ಕೇಳಲು ಹೋಗ್ತಾನೆ. .ಆದರೆ ಈಸಲ ಚುನಾವಣೆಯಲ್ಲಿ ಖಂಡಿತಾ ಜಯವಾಗೋದಿಲ್ಲ. ಅವನು ಸ್ತ್ರೀ ಧನ ಅಪಹರಿಸಿದ್ದಾನೆ."

ಮತ್ತೊಬ್ಬಳು ಬಂದು ಕೈಮುಗಿದು ಬೇಡಿಕೊಂಡಳು. ದೇವಿ ಪ್ರಸನ್ನಳಾಗಿ "ನೀನು ಯೋಚನೆ ಮಾಡುತ್ತಿರುವುದು ನಿನ್ನ ಗಂಡನಿಗಾಗಿ. ನಿನ್ನ ಗಂಡ ಹಿಂದಿರುಗುವುದು ಕಷ್ಟ. ಆದರೆ ಏನೂ ಅನಿಷ್ಟ ಸಂಭವಿಸುವುದಿಲ್ಲ" ಎಂದು ನುಡಿಯಿತು.

ನನಗೂ ಕುತೂಹಲ ಹೆಚ್ಚಿತು. ನನ್ನ ಸ್ನೇಹಿತರನ್ನು ಮುಂದೆಬಿಟ್ಟೆ. ಅವರು ಮುಂದೆ ಬಂದು "ದೇವಿ, ನಮಗೆ ಈ ಸಲ ಪರೀಕ್ಷೆಯಲ್ಲಿ ಪಾಸ್ ಆಗುತ್ತದೆಯೆ?" ಎಂದು ಕೇಳಿಕೊಂಡರು.

ದೇವಿಯು ಕಣ್ಣುಗಳನ್ನು ತಿರುಗಿಸುತ್ತಾ "ಒಬ್ಬರಿಗೆ ಆಗುತ್ತದೆ. ಇನ್ನೊಬ್ಬರಿಗಿಲ್ಲ" ಎಂದಿತು. ನಾನು ಅವರೊಡನೆ ನೋಡಿದಿರೋ! ನಾವು ಒಳ್ಳೆಯ ದಿನವೇ ಬಂದ ಹಾಗಾಯ್ತು!! ವಿಗ್ರಹದ ದೇವಿಗೆ ಕಾಯೊಡೆದು ಹೋಗುವ ಬದಲು, ಜೀವದಿಂದಿರುವ ದೇವಿಯನ್ನು ಕಂಡಂತಾಯಿತು" ಎಂದೆ. ಅವರು "ಹೌದು ನಮ್ಮ ಭಾಗ್ಯ" ಎಂದರು.

ಹಲವು ವರ್ತಕರು, ಕೆಲವು ಅಧಿಕಾರಿಗಳು, ಎಲ್ಲರೂ ತಂತಮ್ಮ ಕಷ್ಟಸುಖಗಳನ್ನು ಹೇಳಿಕೊಂಡರು. ಆ ಮುದುಕಿ ಮಾತ್ರ ಪ್ರತಿಯೊಬ್ಬರಿಂದಲೂ ಐದು, ಹತ್ತು ರೂಪಾಯಿಗಳನ್ನು ವಸೂಲು ಮಾಡುತ್ತಿದ್ದಳು. ನಾವೂ ಸಹ ಐದು ರೂಪಾಯಿ ಕೊಟ್ಟೆವು. ಅದರಲ್ಲಿ ನಾನಂತೂ ಒಟ್ಟು ಎಷ್ಟಾಯಿತೆಂದೇ ಲೆಖ್ಖಹಾಕುತ್ತಿದ್ದೆ. ಸುಮಾರು ಮೂವತ್ತು ಮಂದಿ ಪ್ರಶ್ನೆ ಹಾಕಿದರು. ಸರಾಸರಿ ೫ ರೂ. ಆದರೂ ೧೫೦ ರೂ. ಆಯಿತು. ಲಾಭವೇ ಎಂದುಕೊಂಡೆ. ಅಷ್ಟರಲ್ಲಿ ಒಂದು ವಿಚಿತ್ರ ನಡೆಯಿತು.

ಒಬ್ಬ ಮಧ್ಯಪ್ರಾಯದ ಗಂಡಸು ಬಂದು, ದೇವಿಯ ಮುಂದೆ ಕುಳಿತು "ನಾನು ಯಾರು ಹೇಳು" ಅಂದ. ದೇವಿಯು "ನೀನೊಬ್ಬ ಗಂಡಸು" ಎಂದಿತು. "ನೀನು ಯಾವಾಗ ಬಂದೆ?" ಎಂದು ಪ್ರಶ್ನಿಸಿದ. "ದೇವಿಯ ಆಜ್ಞೆಯಾಯಿತು, ಬಂದೆ" ಎಂದು ಉತ್ತರ ಕೊಟ್ಟಳು ಮೈಮೇಲೆ ಬಂದ ದೇವಿ.

"ಸರಿ ಸರಿ, ಚೆನ್ನಾಗಿದೆ ಮನೆ ಕೆಲಸ ಎಲ್ಲಾ ಬಿಟ್ಟು ಇದೇನೋ ಮಾಡೋದು? ನಡೀ ಮನೆ ಕಡೆ."

"ದೇವಿಯ ಆಜ್ಞೆ—ಅದಕ್ಕಾಗಿ ಬಂದೆ."

"ಯಾರು ದೇವಿ! ನೀನೋ ದೇವಿ! ಮುಚ್ಚು ಬಾಯಿ" ಎಂದ. ಅಷ್ಟರಲ್ಲಿ ಮುದುಕಿ ಬಂದು "ಅಪ್ಪಾ ರಾಮಸ್ವಾಮಿ, ನೀನು ಮನೆಗೆ ಹೋಗು. ಹಿಂದೆಲೇ ಬರುತ್ತೇವೆ. ಅವಳ ಮೈಮೇಲೆ ದೇವಿ ಬಂದಿದ್ದಾಳೆ. ಅದು ಹೋಗಲಿ. ನಾವು ಬಂದುಬಿಡ್ತೇವೆ" ಎಂದಳು. ಆತ "ಇವೆಲ್ಲಾ ಆಗೋದಿಲ್ಲ" ಎಂದು ತಕ್ಷಣ ಓಡಿಹೋಗಿ ಪೋಲೀಸರಿಗೆ ಕಂಪ್ಲೇಂಟು ಕೊಟ್ಟ: "ಯಾರೋ ನನ್ನ ಹೆಂಡತಿಗೆ ಹುಚ್ಚುಹಿಡಿಸಿದ್ದಾರೆ. ನಿನ್ನೆಯಿಂದ ಮನೆಯಲ್ಲೇ ಇಲ್ಲ" ಎಂದ. ಕೂಡಲೇ ಪೋಲೀಸರು ಬಂದರು. ದೇವಿಗೆ ಬುದ್ಧಿ ಕೆರಳಿತು. ನರ್ತನ ಅಸಾಧ್ಯವಾಯಿತು. ಕಣ್ಣುಗಳು ಕೆಂಪೇರಿದುವು. ತೆಂಗಿನಕಾಯನ್ನು ಒಂದೇ ಏಟಿಗೆ ತುಳಿದು ಚೂರುಚೂರು ಮಾಡಿದಳು. ಹಲ್ಲು ಕಿರಿದಳು. ನಾಲಗೆ ನೀಡಿದಳು. ಬಾಯಲ್ಲಿ ರಕ್ತ ಸುರಿಸಿದಳು. ಮೈಯೆಲ್ಲಾ ನವಿರೇಳುವಂತೆ ಆರ್ಭಟಿಸಿದಳು. ಇಷ್ಟುಹೊತ್ತಿಗೆ ಮುದುಕಿ ಪರಾರಿಯಾದಳು. ಸುಮಾರು ಹನ್ನೆರಡು ಗಂಟೆ ಆಗಿರಬಹುದು. ಪೋಲೀಸರು, ನಾವು, ದೇವಿ ಇಷ್ಟೇ ಮಂದಿ. ಉಳಿದವರೆಲ್ಲಾ ಹೊರಟು ಬಿಟ್ಟಿದ್ದರು.

ದೇವಸ್ಥಾನದ ಅಕ್ಕಪಕ್ಕದ ಸಂಸಾರದವರು ಮಾತ್ರ ಇದ್ದರು. ದೇವಿಯು ಕರಾಳವೇಷವನ್ನು ಧರಿಸಿದಳು. ಪೋಲೀಸರಿಗೆ ಗುಂಡಿಗೆ ಒಡೆಯಿತು. ಹತ್ತಿರ ಹೋಗಲು ಸಾಮರ್ಥ್ಯ ಸಾಲದಾಯಿತು. ಹಾಗೂ ಹೀಗೂ ಮಾಡಿ ದಫೇದಾರರು ಒಳಕ್ಕೆ ನುಗ್ಗಿದರು. ದೇವಿಯು "ಕಪ್ಪು ಬಟ್ಟೆ, ಕಾಲಿನಲ್ಲಿ ಜೋಡು, ಎಚ್ಚರಿಕೆ" ಎಂದಳು. ಪೋಲೀಸ್ ದಫೇದಾರರಿಗೆ ಭಯವಾಯಿತು. ಕೋಟು ಬಿಚ್ಚಿದರು, ಜೋಡುಗಳನ್ನು ಕಳಚಿದರು. ಧೈರ್ಯವಾಗಿ ಒಳಕ್ಕೆ ನುಗ್ಗಿದರು. ಹಿಂದೆಯೇ ಕಾನ್‌ಸ್ಟೇಬಲ್ಲುಗಳು ಒಬ್ಬೊಬ್ಬರಾಗಿ ಹಿಂಬಾಲಿಸಿದರು. ದಫೇದಾರರು "ನೀವು ರಾಮಸ್ವಾಮಿಯವರ ಹೆಂಡತಿ ತಾನೆ?" ಎಂದು ಕೇಳಿದರು. ಅದಕ್ಕೆ ದೇವಿ "ನಾನು ಮಹಾ ಶಂಕರಿ. ನಿಮಗಿಲ್ಲಿ ಕೆಲಸವಿಲ್ಲ, ತೊಲಗಿರಿ" ಎಂದು ಘರ್ಜಿಸಿದಳು. ಅಷ್ಟರಲ್ಲಿ ರಾಮಸ್ವಾಮಿ "ಇವಳಿಂದ ನನ್ನ ಮಾನವೆಲ್ಲಾ ಹೋಯಿತು.

ಮನೆ ಬಾಗಿಲು ಬಿಟ್ಟು "ಹೀಗೆಲ್ಲಾ ಬರೋದು, ಕುಣಿಯೋದು. ಆ ಮುದುಕಿ ಇದ್ದಾಳಲ್ಲಾ ಅವಳದ್ದೇ ಇವೆಲ್ಲಾ. ಅವಳನ್ನು ಮೊದಲು ಹಿಡಿಯ ಬೇಕು" ಎಂದ.

ಎಲ್ಲಿಯೋ ಅವಿತುಕೊಂಡಿದ್ದ ಮುದುಕಿ ಓಡಿಬಂದು ದಫೇದಾರರ ಕಿವಿಯಲ್ಲಿ "ನಿಮಗೈವತ್ತು" ಎಂದಳು. ಕೂಡಲೇ ದಫೇದಾರರು "ಅಬ್ಬಬ್ಬಾ! ದೇವಿಗೆ ಕೋಪ ಬಂದುಬಿಟ್ಟದೆ. ವಿರಾಮವಾಗಿ ನೋಡಬೇಕು ರಾಮ ಸ್ವಾಮಿಯವರೇ, ನಾಳೆ ನೋಡೋಣ" ಎನ್ನುತ್ತಾ ಆ ಮುದುಕಿಯೊಡನೆ ಹೊರಕ್ಕೆ ಹೊರಟುಹೋದರು.

ದೇವಿಯು, ಪೋಲೀಸಿನವರು ಬಹುದೂರ ಹೋದಮೇಲೆ, ರಾಮ ಸ್ವಾಮಿ ಸಂಗಡ ದೇವಾಲಯದಿಂದ ಹೊರಕ್ಕೆ ಬಂದು 'ಕ್ಷಮಿಸಿ' ಎಂದ ಳಂತೆ.



# ನಾಯಿ ಕಚ್ಚಿ ಊರು ಹಾಳಾಯಿತು

—::—

ನಮ್ಮ ಹಳ್ಳಿ ಬಹಳ ಚಿಕ್ಕದು. ಇರುವುದೆಲ್ಲಾ ನೂರು ಮನೆಗಳು. ಸುಮಾರು ಆರುನೂರು ಪ್ರಜಾಸಂಖ್ಯೆ. ಒಟ್ಟಿನಲ್ಲಿ ನೆಮ್ಮದಿ ಗ್ರಾಮವೆಂದೇ ಹೇಳಬೇಕು. ನಮ್ಮ ಪಟೇಲ ಒಳ್ಳೆಯವನೆಂದೇ ಹೆಸರು ಪಡೆದಿದ್ದಾನೆ. ಅವನು ತನ್ನ ಕೈಲಾದಷ್ಟು ಗ್ರಾಮಸ್ಥರಿಗೆ ಉಪಕಾರ ಮಾಡಿದ್ದಾನೆ. ಒಂದು ದೇವಸ್ಥಾನ, ಒಂದು ಅಶ್ವತ್ಥಕಟ್ಟೆ, ಒಂದು ಭಾವಿ ಇಷ್ಟನ್ನೂ ಒಬ್ಬನೇ ಮಾಡಿಸಿಕೊಟ್ಟಿದ್ದಾನೆ. ಇಂತಹ ಪಟೇಲನನ್ನು ಕಂಡರೆ ಯಾರು ತಾನೇ ಗೌರವಿಸುವುದಿಲ್ಲ?

ಈ ಹಳ್ಳಿಗೆ ಕಳೆ ತುಂಬಿಕೊಡುವವರು ಮತ್ತೊಬ್ಬರು ಇದ್ದಾರೆ. ಅವರೇ ಉಪಾಧ್ಯಾಯರು. ಅದೇ ಸ್ಥಳದವರು. ಕನ್ನಡ ಭಾಷೆಯಲ್ಲಿ ಚೆನ್ನಾಗಿ ನುರಿತವರು. ಈಗಿನ ಬಿ.ಎ., ಎಂ.ಎ. ತರಗತಿಗಳಿಗೆ ಕನ್ನಡ ಪಾಠವನ್ನು ಅವರು ಹೇಳಿಕೊಡಬಲ್ಲರು. ಓದಿರುವುದು ಹಳೆಯಕಾಲದ ಲೋವರ್ ಸೆಕೆಂಡರಿ. ಆದರೂ ಪಾಂಡಿತ್ಯ ಬಹು ಚೆನ್ನಾಗಿದೆ. ಈ ಊರಿನ ಅನೇಕ ಮಂದಿ ಇವರ ಶಿಷ್ಯರೇ, ಇವರ ಮಾತಿಗೆ ಬದಲಿಲ್ಲ, ಅಡ್ಡವಿಲ್ಲ, ಪಟೇಲನೂ ಸಹ ಇವರ ಶಿಷ್ಯನೇ. ಯಾವ ಸುದ್ದಿ ತಿಳಿಯಬೇಕಾದರೂ, ಯಾವ ಪತ್ರವ್ಯವಹಾರ ನಡೆಯಬೇಕಾದರೂ ಇವರ ಹತ್ತಿರವೇ ಬರಬೇಕು. ಇವರು ಈಗಿನ ಕಾಲದ ನಾಗರಿಕತೆಗೆ ಮನಸೋಲದಿದ್ದರೂ, ವೃತ್ತಪತ್ರಿಕೆಗಳು, ಮಾಸಪತ್ರಿಕೆಗಳು ಮೊದಲಾದುವುಗಳನ್ನು ತರಿಸಿಕೊಂಡು ತಾವೂ ಓದಿ ಇತರರಿಗೂ ಓದಿ ಹೇಳುತ್ತಾರೆ. ಹೀಗಿರುವುದರಿಂದ ಗ್ರಾಮಸ್ಥರಲ್ಲಿ ಅನೇಕ ಮಂದಿ ಸ್ವಲ್ಪಮಟ್ಟಿಗೆ ನಡೆನುಡಿಯನ್ನು ತಿದ್ದಿಕೊಂಡಿದ್ದಾರೆ. ಆದರೆ ಹೆಂಗಸರೊ?

೦ ೦ ೦ ೦

ಅಂದು ಊರು ಹಬ್ಬ. ಎಲ್ಲರ ಮನೆಯಲ್ಲೂ ಸಡಗರ. ಹೊಸ ಸೀರೆ, ಹೊಸ ಉಡುಪು, ಮಕ್ಕಳ ಅಂಗಿಯೆಲ್ಲಾ ರಂಗುರಂಗು. ಪಟೇಲನ ಮನೆಯಲ್ಲಿ ಅಡಿಗೆ ಸ್ವಲ್ಪ ವಿಶೇಷ. ಅವನ ಮನೆಯಲ್ಲಿ ಎರಡು ನಾಯಿಗಳು—ಅವಕ್ಕೂ ವಿಶೇಷವೇ. ಹಬ್ಬವಲ್ಲವೆ? ಮಕ್ಕಳ ಓಡಾಟದಲ್ಲಿ ನಾಯಿಗಳಿಗೆ ದಿಕ್ಕೇ ತೋಚಲಿಲ್ಲ. ಸಂಜೆಯ ಹೊತ್ತಿಗೆ ಸರಿಯಾಗಿ ಯಾವುದೋ ಎರಡು ಹುಡುಗರು ಸೇರಿ ಆ ನಾಯಿಗಳ ಸರಪಳಿಯನ್ನು ಸಡಲಿಸಿ ಬಿಟ್ಟು ಬಿಟ್ಟರು. ಅವು ಚೆನ್ನಾಗಿ ತಿಂದು ಸೊಕ್ಕಿ ಮೆರೆದವು.

ಅದೇ ಹೊತ್ತಿಗೆ ಕೆಳಗಿನ ಬೀದಿ ಸಣ್ಣಪ್ಪನ ಮಗ ಪಟೇಲನ ಮನೆಯ ಮುಂದೆ ಹಾದುಹೋಗುತ್ತಿದ್ದ. ಆ ನಾಯಿಗಳು ತಮ್ಮ ಪದ್ಧತಿಗನುಸಾರವಾಗಿ ಬೊಗಳಿದವು. ಪುಟ್ಟಹುಡುಗ ಸುಮ್ಮನೆ ಇರದೆ ಕಲ್ಲುಗಳನ್ನು ತೆಗೆದುಕೊಂಡು ಅವುಗಳಿಗೆ ಹೊಡೆದನು. ಅವು ರೇಗಿ ಎಗರಿಬಿದ್ದು ಕಚ್ಚಿಯೇ ಬಿಟ್ಟವು. (ಕಚ್ಚಿದ್ದು ಒಂದು ನಾಯಿ ಮಾತ್ರ) ಸಣ್ಣಪ್ಪನ ಮಗ ಅಳುತ್ತಾ ಅಲ್ಲಿಯೇ ಉರುಳಿದನು.

ಕೂಡಲೇ ಜನಸಂದಣಿ ಸೇರಿತು. ಸಣ್ಣಪ್ಪನ ಹೆಂಡತಿ ಓಡಿಬಂದಳು. ಮಗುವನ್ನು ಕಂಡು, ಬಾಯಿಗೆ ಬಂದಂತೆ ಆ ನಾಯಿಗಳನ್ನೂ ಪಟೇಲನ ಮನೆಯವರನ್ನೂ ಬೈಯ್ಯತೊಡಗಿದಳು. ಸಣ್ಣಪ್ಪ ಸಣ್ಣಗಿದ್ದರೂ ಅವನ ಹೆಂಡತಿ ಯಾವುದರಲ್ಲಿಯೂ ಸಣ್ಣವಳಲ್ಲ. ಬಾಯಿ ಬಲು ದೊಡ್ಡದು. ಬಾಯಿಂದ ಅನೇಕ ಮಾತುಗಳು ಹೊರಬಿದ್ದುವು. ಈ ಮಾತುಗಳು ಪಟೇಲನ ಹೆಂಡತಿಯನ್ನು ಕೆರಳಿಸಿದುವು. ಅವಳಿಗೂ ಸ್ಮೃತಿ ತಪ್ಪಿತು. ಪಟೇಲನೇನೋ ಊರಿಗೆ ಉಪಕಾರಿ ಆಗಿರಬಹುದು. ಆದರೆ ಅವನ ಹೆಂಡತಿ ಹಾಗಲ್ಲ. ಸಣ್ಣಪ್ಪನ ಹೆಂಡತಿಗೂ ಪಟೇಲನ ಹೆಂಡತಿಗೂ ವಾಗ್ಯುದ್ಧ ಬಿರುಸಾಗಿಯೇ ನಡೆಯಿತು. ಈ ಅವಾಂತರದಲ್ಲಿ ಆ ಮಗುವನ್ನು ವಿಚಾರಿಸುವವರೇ ಇಲ್ಲವಾಯಿತು. ಅದು ಅಳುತ್ತಾ ಇದ್ದರೆ ಇವರು ಬಾಯಿ ಬಡಿಯುತ್ತಾ ಇರುವುದು, ಇವುಗಳ ಜೊತೆಗೆ ನಾಯಿಗಳೂ ಬೊಗಳುವುದು. ಹೀಗಾಗಿ ಗದ್ದಲವೋ ಗದ್ದಲ. ಊರೆಲ್ಲಾ ಇದೇ ಮಾತೆ ಸರಿ, ಕೆಲವರು ಪಟೇಲನ ಹೆಂಡತಿಯ ಕಡೆ ವಾದಿಸಿದರು, ಕೆಲವರು ಸಣ್ಣಪ್ಪನ ಹೆಂಡತಿಯ ಕಡೆ ವಾದಿಸಿದರು.

೦ ೦ ೦ ೦

"ನಾಯಿಗಳಿಗೇನು ಬುದ್ಧಿ ಇದೆಯೇ? ಏನೋ ತಿಳಿಯದೆ ಕಚ್ಚಿ ಬಿಟ್ಟವು. ಅದಕ್ಕೆ ಹೀಗೆಲ್ಲಾ ಹಠಮಾಡುವುದೇ?"

"ನಾಯಿಗೆ ಬುದ್ಧಿ ಇದೆ ಎಂದು ಯಾರು ಹೇಳಿದವರು? ಅವುಗಳನ್ನು ಕಟ್ಟಿಹಾಕಬೇಡವೆ? ಸುಮ್ಮನೆ ಬಿಟ್ಟರೆ ಏನು ಗತಿ? ಈವತ್ತು ಈ ಮಗುವನ್ನು ಕಚ್ಚಿತು. ನಾಳೆ ಇನ್ನು ಯಾರನ್ನಾದರೂ ಕಚ್ಚುತ್ತದೆ."

"ಆಗಲಿ, ಈ ಮಾತುಗಳೆಲ್ಲಾ ನೋಡಿದ್ದೇನೆ. ನಿಮ್ಮ ಮಗು ಬಹಳ ಸಾಚಾ ಅಲ್ಲವೆ? ಕಲ್ಲು ತಗೊಂಡು ಏಕೆ ಹೊಡೆಯಬೇಕು? ಆ ಮಗು-ಸುಮ್ಮನಿರೋ ಮಗುವೆ? ಅವರಮ್ಮ ಎಷ್ಟು ಬಜಾರಿಯೋ ಅಷ್ಟೇ ಆ ಮಗುವೂ."

"ಹೌದು ಹೌದು. ಹಲ್ಲು ಹಿಡಿದು ಮಾತನಾಡು. ಮಗುವಿನ ತಾಯಿ ಬಜಾರಿಯಂತೆ. ಓಹೋ! ನೀವೆಲ್ಲಾ ಬಲು ಸಾಭ್ಯಸ್ಥರೋ?"

ಇಷ್ಟೆಲ್ಲಾ ಆಗುವಾಗ್ಗೆ ರಾತ್ರಿ ಹತ್ತಾಯಿತು. ಯಾರಿಗೂ ಕಾಲದ ಮೇಲೆ ಜ್ಞಾನವೇ ಇಲ್ಲ. ಹೆಂಗಸರ ಜಗಳ ಗಂಡಸರಿಗೂ ಬಂತು. ಪಟೇಲ ತೋಟಿಯನ್ನು ಕರೆದು, "ಬೆಳಗಾಗೋ ಹೊತ್ತಿಗೆ ಎಲ್ಲರೂ ಗೌಡನ ಮನೆಗೆ ಬರಬೇಕು ಎಂದು ಸಾರಿಬಿಟ್ಟು ಬಾ" ಎಂದು ಹೇಳಿದನು.

ಮರುದಿನ ಊರೆಲ್ಲಾ ಸೇರಿ ಪಂಚಾಯಿತಿ. ತಪ್ಪು ಯಾರದು? ನಾಯಿಗಳದೇ ಅಥವಾ ಮಗುವಿನದೇ, ಇದು ತೀರ್ಮಾನವಾಗಬೇಕು. ಒಬ್ಬ ರೈತ ಮೇಲಕ್ಕೆದ್ದು, ಸಲಹೆ ಕೊಟ್ಟ "ನಾಯಿಗೂ ಬುದ್ಧಿಯಿಲ್ಲ. ಮಗುವಿಗೂ ಬುದ್ಧಿಯಿಲ್ಲ, ಆದ್ದರಿಂದ ಇಬ್ಬರೂ ತಪ್ಪಿತಸ್ಥರಲ್ಲ." ಇನ್ನೊಬ್ಬ ಹೇಳಿದ "ನಾಯಿ ಕಚ್ಚಿತು; ಮಗು ಅತ್ತಿತು. ಆದರೆ ಸಣ್ಣಪ್ಪನ ಹೆಂಡತಿ ಆ ಮಗುವಿನ ತಾಯಿ ಬಾಯಿಗೆ ಬಂದ ಹಾಗೆ ಬೊಗಳಿದಳಲ್ಲಾ, ಅವಳಿಗೇನು ಶಿಕ್ಷೆ?"

ಸಣ್ಣಪ್ಪನೇ ಮೇಲೆಕ್ಕೆದ್ದ "ಏನು! ನನ್ನ ಹೆಂಡತಿಗೆ ಶಿಕ್ಷೆಯೇ? ಸರಿ ಸರಿ. ಹಾಗೇನಾದರೂ ಮಾಡೋದಾದರೆ ಪಟೇಲನ ಹೆಂಡತಿಗೆ ಎಂತಹ ಶಿಕ್ಷೆ ಗೊತ್ತೇನು? ಅವಳನ್ನು ನಡುದಾರಿಯಲ್ಲಿ ನಿಲ್ಲಿಸಿ, ತಣ್ಣೀರು ಸುರಿದು ಮಂಗಳಾರತಿ ಮಾಡಬೇಕು" ಎಂದು ಅಬ್ಬರಿಸಿ ನುಡಿದ.

ಪಟೇಲನಿಗೆ ಸ್ವಲ್ಪ ಕೋಪ ಬಂತು. ಸಣ್ಣಪ್ಪನನ್ನು ಕುರಿತು "ಅಯ್ಯಾ, ಸಣ್ಣಪ್ಪ, ನೀನು ನನ್ನ ಮೇಲೆ ಇಷ್ಟು ಕೋಪವಾಗಿದ್ದೀ ಅಂತ

ನಾನು ತಿಳಿದಿರಲಿಲ್ಲ. ಈವತ್ತಿಗಾಯಿತು. ಇನ್ನು ಮುಂದೆ ಏನಾದರೂ ನನ್ನ ಹೆಂಡತಿ ಸುದ್ದಿ ಎತ್ತಿದೇ ನೋಡಿಕೋ—ನಿನ್ನನ್ನು ಈ ಊರು ಬಿಟ್ಟು ಓಡಿಸಿಬಿಡ್ತೀನಿ, ಎಚ್ಚರಿಕೆ" ಎಂದು ಸೂಚನೆ ಕೊಟ್ಟ.

ಸಣ್ಣಪ್ಪ ಗೊಣಗಾಡಿದ. ಪಕ್ಕದಲ್ಲಿದ್ದವರು ಸಮಾಧಾನ ಹೇಳಿ ಅವನನ್ನು ಕುಳ್ಳಿರಿಸಿದರು. ಅಷ್ಟರಲ್ಲಿ ಕುಂಟವೆಂಕಟ ಮೇಲಕ್ಕೆದ್ದ. "ಬುದ್ದೀ ನಾನೊಂದು ಉಪಾಯ ಹೇಳ್ತೀನಿ. ಧರ್ಮರಾಯನಿಗೆ ರಾಮರು ಎಷ್ಟೊಂದು ಹೇಳಿದರು. ಧರ್ಮರಾಯನ ಕರಗ ಯಾತಕ್ಕೆ ನೋಡೋದು. ರಾಮದೇವರ ಪಟಕ್ಕೆ ಹೂವ ಹಾಕುವುದು, ಹಾಗೇನೇ ನಮ್ಮ ಹಳ್ಳಿ, ಪಟೇಲ ನಮಗೆಲ್ಲಾ ಉಪಕಾರ ಮಾಡವ್ನೆ, ಅಕಸ್ಮಾತ್ ಆ ನಾಯಿ ಮಗಾನ ಕಚ್ಚಿಬಿಡ್ತು. ಈಕಿತ್ತ ಮಾಫ್ ಮಾಡಿಬಿಡಿ. ಆಂಜನೇಯನ ದೇವಸ್ಥಾನದಲ್ಲಿ ನಾಳೆ ಪೂಜೆ ಮಾಡಿ ಪರ್ಸಾದ ತಕೊಂಡ್ಬಿಟ್ರೆ ಎಲ್ಲಾ ಸರಿಹೋಗ್ತೈತೆ" ಎಂದು ತನಗೆ ತೋಚಿದ ಮಾತು ಹೇಳಿದ.

ರಾಮಯ್ಯ ದುಪಟಿ ಹೊದ್ದುಕೊಂಡು ಬಾಯಿ ಬಿಟ್ಟ "ನೋಡು ಗೌಡಾ ಇಷ್ಟೆಲ್ಲಾ ಬೇಡ. ನಿನ್ನ ಹೆಂಡರು ಐದು ರೂಪಾಯಿ ದಂಡ ಕೊಡಲಿ. ಸಣ್ಣಪ್ಪನ ಹೆಂಡರು ಐದು ರೂಪಾಯಿ ದಂಡ ಕೊಡಲಿ. ಎಲ್ಲಾ ಸೇರಿಸಿ, ದೇವರಿಗೆ ಪೂಜೆ ಮಾಡಿಸಿಬಿಡೋಣ. ಇದೇ ಸರಿ."

ಕೆಲವರು ಪಟೇಲನ ಕಡೆ ಶಿಫಾರಸು ಮಾಡುತ್ತಾ "ಸಣ್ಣಪ್ಪನ ಹೆಂಡತೀನೆ ಹತ್ತು ರೂಪಾಯಿ ಕೊಡಲಿ" ಎಂದು ವಾದಿಸಿದರು. ಇನ್ನು ಕೆಲವರು "ನಾಯಿಯ ಮಾಲೀಕರು ಯಾರು? ಅವರೇ ದಂಡ ಕೊಡಲಿ" ಎಂದರು.

ಕಡೆಗೆ ತೀರ್ಮಾನವೇ ಆಗಲಿಲ್ಲ. ಅನುಮಾನ, ಅಸಮಾಧಾನ ಗಳಿಂದಲೇ ಪಂಚಾಯಿತಿ ಮುಗಿದು ಹೋಯಿತು.

ಹತ್ತು ಹದಿನೈದು ದಿನಗಳು ಕಳೆದ ಬಳಿಕ ಸಣ್ಣಪ್ಪ ಯಾವುದೋ ಕೆಲಸಕ್ಕೆ ಬೆಂಗಳೂರಿಗೆ ಬಂದ, ಅಲ್ಲಿ ಸ್ನೇಹಿತರೊಬ್ಬರ ಮನೆಯಲ್ಲಿ ಇಳಿದು ಕೊಂಡ. ಊಟಮಾಡ್ತಾ ನಾಯಿ ಕಚ್ಚಿದ ಕತೆಯನ್ನೆಲ್ಲಾ ಹೇಳಿದ. ಅವರು ಹೇಳಿದರು "ನೀನು ಒಂದು ನೋಟೀಸ್ ಲಾಯರ್ ಮೂಲಕ ಕೊಡಿಸು. ನಿನ್ನ ನಾಯಿಗಳಿಂದ ನನ್ನ ಮಗು ಪ್ರಾಣವೇ ಹೋಗುತ್ತಿತ್ತು. ಇಂತಹ ನಾಯಿಗಳನ್ನು ನೀನು ಸಾಕಕೂಡದು. ಇಲ್ಲವೇ ಭದ್ರವಾಗಿ ಕಟ್ಟಿಹಾಕ

ಬೇಕು. ಈಗ ನಿನ್ನ ನಾಯಿ ನನ್ನ ಮಗುವನ್ನು ಕಚ್ಚಿದ್ದರಿಂದ ನನಗೆ ಬಹಳ ನಷ್ಟವಾಗಿದೆ. ಅದನ್ನು ನೀನೇ ಕೊಡಬೇಕು, ಎಂದು ಮುಂತಾಗಿ ಬರೆಸು" ಎಂಬುದಾಗಿ ಸಲಹೆ ಕೊಟ್ಟರು. ಸಣ್ಣಪ್ಪನಿಗೆ ಸರಿ ಎನ್ನಿಸಿತು. ಊರಿಗೆ ಹಿಂದಿರುಗಿದ ಕೂಡಲೇ ಒಬ್ಬ ಲಾಯರನ್ನು ಗೊತ್ತುಮಾಡಿ, ನೋಟೀಸ್ ಕೊಡಸಿದ.

ಪಟೇಲನಿಗೆ ಗಾಬರಿಯಾಯಿತು. ಅವನು ಬೆಂಗಳೂರಿಗೆ ಬಂದು ಇನ್ನೊಬ್ಬ ಲಾಯರ ಸಂಗಡ ಮಾತನಾಡಿ, ಇವನ ಮೇಲೆ ಕೇಸ್ ಹಾಕಿಸಿದ. "ಸಣ್ಣಪ್ಪ ನನ್ನ ಮೇಲೆ ಇಲ್ಲದ್ದೆಲ್ಲಾ ಹೇಳಿ, ಅವಮಾನ ಮಾಡುತ್ತಿದ್ದಾನೆ. ಸಣ್ಣಪ್ಪನ ಮಗುವನ್ನು ನಮ್ಮ ನಾಯಿ ಕಚ್ಚಲೇ ಇಲ್ಲ. ಯಾವ ನಾಯಿ ಕಚ್ಚಿತೋ ಯಾರಿಗೆ ಗೊತ್ತು?" ಎಂದು ವಾದಿಸಿದ. ಹೀಗೆ ಇಬ್ಬರೂ ಕೋರ್ಟು ಹತ್ತಿದರು. ಲಾಯರ್ ಮನೆ ತಿರುಗಿದರು. ಮೂರು ನಾಲ್ಕು ಸಲ ಕೇಸ್ ಮುಂದುವರಿಯಿತು. ಆರು ತಿಂಗಳ ಮೇಲೆ ಕೇಸ್ 'ಡಿಸ್‌ಮಿಸ್' ಆಗಿಹೋಯಿತು.

ಅಂದಿನಿಂದ ನಮ್ಮೂರಲ್ಲಿ ಶಾಂತಿಯೇ ಇಲ್ಲ. ಪಾಠಶಾಲೆ, ಗ್ರಾಮ ಪಂಚಾಯಿತಿ, ರಸ್ತೆ, ದೇವಸ್ಥಾನ ಇವುಗಳಲ್ಲಿ ಯಾರಿಗೂ ಆಸಕ್ತಿಯಿಲ್ಲ. ಉಪಾಧ್ಯಾಯರು ಮಾತ್ರ ಹಾಗೆಯೇ ಇದ್ದಾರೆ. ಅವರ ಮನೆಗೆ ಸಣ್ಣಪ್ಪನು ಪಟೇಲನಿಲ್ಲದಾಗಲೂ, ಪಟೇಲನು ಸಣ್ಣಪ್ಪನಿಲ್ಲದಾಗಲೂ ಹೋಗುತ್ತಾರೆ. ಪಟೇಲನ ಪಕ್ಷ, ಸಣ್ಣಪ್ಪನ ಪಕ್ಷ ಎಂದು ಎರಡು ಪಂಗಡಗಳಾಗಿವೆ. ಉಪಾಧ್ಯಾಯರು ತಮ್ಮ ಕೈಲಾದ್ದನ್ನು ಮಾಡುತ್ತಾ ಇದ್ದಾರೆ. ಇನ್ನೇನು ಅವರೂ ಇಷ್ಟರಲ್ಲಿಯೇ ಪೆನ್‌ಷನ್ ತೆಗೆದುಕೊಳ್ಳುತ್ತಾರೆ. ಆಮೇಲೆ ಊರಿನ ನ್ಯಾಯಕ್ಕೆ ಪ್ರವೇಶ ಮಾಡಬಹುದು.



# ಕಾಡಹಳ್ಳಿ ಗೌಡ

———::———

ಕಾಡಹಳ್ಳಿ ಒಂದು ಚಿಕ್ಕ ಹಳ್ಳಿ. ಆ ಹಳ್ಳಿಯಲ್ಲಿ ಪಾಠಶಾಲೆ ಬಹಳ ವರ್ಷಗಳಿಂದಲೂ ಇರಲಿಲ್ಲ. ಗ್ರಾಮಸ್ಥರು ಸರ್ಕಾರದವರನ್ನು ಆಗಾಗ್ಗೆ ಕೇಳಿಕೊಳ್ಳುತ್ತಿದ್ದರು. ಆದರೆ ಅದು ಪ್ರಯೋಜನವಾಗಲಿಲ್ಲ. ಕಟ್ಟಕಡೆಗೆ ಊರಿನ ಮುಖಂಡರೆಲ್ಲಾ ಸೇರಿ, ಪಟೇಲ್ ತಿಮ್ಮೇಗೌಡನನ್ನು ಮುಂದಿಟ್ಟು ಕೊಂಡು ಇನ್‌ಸ್ಪೆಕ್ಟರ್‌ರವರ ಆಫೀಸಿಗೆ ದಂಡು ಹೊರಟರು. ಈ ಹೊರ ಡುವ ಅವಾಂತರದಲ್ಲಿ ಒಬ್ಬನನ್ನು ಮಾತ್ರ ಮರೆತೇಬಿಟ್ಟರು. ಅಂದು ಇನ್‌ಸ್ಪೆಕ್ಟರೂ ಆಫೀಸಿಗೆ ಬಂದಿದ್ದರು. ಮಾತು ಕತೆ ಆದಮೇಲೆ ಗ್ರಾಮ ಸ್ಥರು "ಸ್ವಾಮಿ, ನಮ್ಮ ಹಳ್ಳಿಗೆ ಒಂದು ಸ್ಕೂಲು ಕೊಡಬೇಕು. ಇಲ್ಲ ದಿದ್ದರೆ ನಾವು ನಾಶವಾಗುವುದು ಖಂಡಿತ" ಎಂದು ಪ್ರಾರ್ಥಿಸಿದರು.

ಏನೋ ಕಾಗದ ಓದುತ್ತಾ, ಇವರ ಮಾತು ಕೇಳಿ ಇನ್‌ಸ್ಪೆಕ್ಟರು, "ನಿಜ, ನೀವು ಮನಸ್ಸು ಮಾಡಿ ಒಂದು ಸೊಗಸಾದ ಕಟ್ಟಡ ಕಟ್ಟಿಸಿಕೊಡಿ. ತಕ್ಷಣ ಒಂದು ಪ್ರೈಮರಿ ಸ್ಕೂಲನ್ನು ಕೊಡಿಸುತ್ತೇನೆ" ಎಂದು ವಿನಯ ವಾಗಿ ಉತ್ತರ ಕೊಟ್ಟರು.

ಪುನಃ ಗ್ರಾಮಸ್ಥರು "ಬಹಳ ಸಂತೋಷ ಸ್ವಾಮಿ, ನೀವು ದಯ ವಿಟ್ಟು ಹಾಗೆ ಮಾಡಿ. ನಾವು ಖಂಡಿತ ಕಟ್ಟಡ ಕಟ್ಟಿಸಿಕೊಡುತ್ತೇವೆ" ಎಂದು ಹೇಳಿದರು. ಕಡೆಗೆ ಗ್ರಾಮಸ್ಥರೇ ಕಟ್ಟಡದ ಜವಾಬ್ದಾರಿ ಹೊರು ವುದಾಗಿಯೂ, ಸರ್ಕಾರದವರು ಪಾಠಶಾಲೆಯನ್ನು ಕೊಡುವುದಾಗಿಯೂ ತೀರ್ಮಾನವಾಯಿತು. ಊರಿನ ಮುಖಂಡರು ಗ್ರಾಮಕ್ಕೆ ಹಿಂದಿರುಗಿ ಕಟ್ಟಡ ಕಟ್ಟಿಸುವ ಯೋಚನೆಯಲ್ಲಿ ಮಗ್ನರಾದರು.

ಆ ಹಳ್ಳಿಯಲ್ಲಿ ಮುನೇಗೌಡ ಎಂಬುವನು ಬಹಳ ಮುಖ್ಯನಾದ

ವನು. ಮುಖಂಡರೆಲ್ಲಾ ಸೇರಿ ಇನ್ಸ್‌ಪೆಕ್ಟರ್ ಆಫೀಸಿಗೆ ಹೋದ ದಿನ ಇವನನ್ನು ಕರೆದಿರಲಿಲ್ಲ. ಆದ್ದರಿಂದ ಅವನಿಗೆ ಸ್ವಲ್ಪ ಅಸಮಾಧಾನ. ಕೆಲವರು ಹೋಗಿ ಅವನ ಸಂಗಡ ನಡೆದ ಸಂಗತಿಯನ್ನು ಹೇಳಿದರು. ಅದಕ್ಕೆ ಅವನು "ನಂಗೆಲ್ಲಾ ಗೊತ್ತು. ಕಟ್ಟಡ ಯಾರು ಕಟ್ಟಿಸಿಕೊಡೋರು? ಇವರು ಹೋಗಿ ಕಟ್ಟಡದ ಜವಾಬ್ದಾರಿ ಹೊತ್ತುಕೊಂಡು ಬಂದರಲ್ಲಾ ಇವರನ್ನು ಯಾರು ಈ ಕೆಲಸ ಮಾಡಿಕೊಂಡು ಬಾ ಎಂದವರು? ಕಟ್ಟಡ ವನ್ನು ಸರ್ಕಾರದವರೇ ಕೊಡಬೇಕು" ಎಂದು ಮುಂತಾಗಿ ಗೊಣಗಲು ಆರಂಭಿಸಿದ.

ಸ್ವಲ್ಪ ದಿನಗಳು ಕಳೆದುವು ಕಟ್ಟಡದ ಕೆಲಸ ಆರಂಭವಾಯಿತು. ಕೆಲವರು ಶ್ರದ್ಧೆಯಿಂದ ಕೆಲಸ ಮಾಡಿದರು. ಇನ್ನು ಕೆಲವರು ಮುನೇ ಗೌಡನ ಮಾತು ಕೇಳಿಕೊಂಡು ಸುಮ್ಮನಾದರು. ಕಟ್ಟಡದ ಕೆಲಸ ಸರಿ ಯಾಗಿ ಮುಂದುವರಿಯಲೇ ಇಲ್ಲ. ಇಷ್ಟರಲ್ಲೇ ಪಟೇಲ್ ತಿಮ್ಮೇಗೌಡ ನಿಗೆ ಖಾಯಿಲೆ ಬಂದುಬಿಟ್ಟಿತು. ಕೆಲಸ ಇನ್ನೂ ಹಿಂದಕ್ಕೆ ಬಿತ್ತು. ಇದೇ ಸಮಯವೆಂದರಿತು ಮುನೇಗೌಡ ಜನಗಳಿಗೆಲ್ಲಾ ಉಪದೇಶ ಮಾಡಿ ಸರ್ಕಾರದವರೇ ಸ್ಕೂಲು ಕೊಡಬೇಕು. ಅದರ ಖರ್ಚೆಲ್ಲಾ ಅವರೇ ವಹಿಸ ಬೇಕು ಎಂದು ಸಾರಿದ. ತಿಳಿಯದ ರೈತರು "ಹೌದು ಹೌದು" ಎಂದರು. ಹೀಗಾಗಿ ಕಟ್ಟಡದ ಕೆಲಸ ಅರ್ಧಕ್ಕೇ ನಿಂತಿತು.

ಒಂದು ದಿನ ಇನ್ಸ್‌ಪೆಕ್ಟರು ಹಳ್ಳಿಗೆ ಬಂದರು. ಗ್ರಾಮಸ್ಥರನ್ನು ಭೇಟಿ ಮಾಡಿದರು. ಪಟೇಲ್ ತಿಮ್ಮೇಗೌಡನಿಗೆ ಖಾಯಿಲೆ ಎಂದು ತಿಳಿದ ಮೇಲೆ ಕೂಡಲೆ ಅವನ ಮನೆಗೆ ಹೋಗಿ ಯೋಗಕ್ಷೇಮ ವಿಚಾರಿಸಿದರು. ಆಗ ಗೌಡ "ಸ್ವಾಮಿ ಈ ಊರಿನಲ್ಲಿ ಒಬ್ಬ ಸೇರಿಕೊಂಡು ಇಸ್ಕೂಲ್ ಕೆಲಸ ಎಲ್ಲಾ ಹಾಳು ಮಾಡಿದ. ಅವನೇ ಉದ್ಧಾರ ಆಗಲಿ. ನಮಗೇನು? ನಾನೂ ಖಾಯಿಲೆ ಮಲಗಿಬಿಟ್ಟೆ. ಕೆಲಸ ಅಷ್ಟಕ್ಕೇ ನಿಂತುಬಿಟ್ಟೈತೆ? ಆಗಲಿ. ನನ್ನ ತಂದೆಯವರ ಹೆಸರಿನಲ್ಲಿ ಒಂದು ಕಟ್ಟಡ ಕಟ್ಟಿಸಿಕೊಟ್ಟುಬಿಡ್ತೇನೆ. ಸ್ವಾಮಿ, ನಿಮಗೆ ನಂಬಿಕೆ ಇಲ್ಲದಿದ್ದರೆ, ಬೇಕಾದರೆ ಪತ್ರ ಬರೆದುಕೊಡ್ತೇನೆ" ಎಂದು ಹೇಳುತ್ತಾ ಕಣ್ಣೀರು ಹಾಕಿದ.

ಇನ್ಸ್‌ಪೆಕ್ಟರು ಸಮಾಧಾನ ಹೇಳಿ, ಮೇಲಕ್ಕೆ ಶಿಫಾರಸು ಕಳುಹಿಸಿರು ವುದಾಗಿಯೂ ವಿದ್ಯಾ ಇಲಾಖಾ ಡೈರೆಕ್ಟರು ಒಪ್ಪಿ ತಿಳಿಸಿರುವುದಾಗಿಯೂ

ಹೊರಟು ಬಂದರು. ತಿಮ್ಮೇಗೌಡನು ಕೂಡಲೇ ಮನೆಮಕ್ಕಳೆಲ್ಲರನ್ನೂ ಕರೆದು "ನೋಡಿ, ಊರೊಳಗಿನ ಮಕ್ಕಳೆಲ್ಲಾ ಓದುಬರಹ ಕಲಿತು ಕೊಳ್ಳಲಿ ಅಂತ ನಮ್ಮ ಅಯ್ಯನ ಹೆಸರಿನಲ್ಲಿ ಒಂದು ಇಸ್ಕೂಲ್ ಕಟ್ಟಿಸ ಬೇಕು ಅಂತ ಇದ್ದೀನಿ. ಖರ್ಚೆಲ್ಲಾ ನನ್ನದೇ. ನಮ್ಮ ಅಯ್ಯನ ಹೆಸರು ಶಾಶ್ವತವಾಗಿ ಇರ್‍ತೈತೆ. ಅಲ್ಲವೆ? ನಿಮ್ಮ ಅಭಿಪ್ರಾಯವೇನು?" ಎಂದ.

ಹೆಂಡತಿ ಮಕ್ಕಳೆಲ್ಲಾ ಮರುಮಾತಾಡದೆ "ಆಗಲಿ" ಎಂದರು. ಸ್ವಲ್ಪ ದಿನಗಳಲ್ಲಿಯೇ ತಿಮ್ಮೇಗೌಡನಿಗೆ ಖಾಯಿಲೆ ಸ್ವಲ್ಪ ಹುಷಾರಾಯಿತು. ಸ್ಕೂಲ್‌ಕೆಲಸ ಮೊದಲಾಯಿತು. ಇಟ್ಟಿಗೆ, ಕಲ್ಲು, ಜಲ್ಲಿ, ಎಲ್ಲಾ ಬಂದು ಬಿತ್ತು. ಗಾರೆ ಕೆಲಸದವರನ್ನೂ, ಕೂಲಿ ಜನರನ್ನೂ ಗೊತ್ತುಮಾಡಿದ್ದಾ ಯಿತು. ಸುಮಾರು ಏಳೆಂಟು ತಿಂಗಳಲ್ಲಿ ಕಟ್ಟಡವೂ ಸಿದ್ಧವಾಯಿತು. ಅಷ್ಟು ಹೊತ್ತಿಗೆ ಹೊಸ ಸ್ಕೂಲ್ ಇನ್‌ಸ್ಪೆಕ್ಟರು (ಹಿಂದಿನವರು ವರ್ಗವಾಗಿದ್ದ ಪ್ರಯುಕ್ತ) ಬಂದು, ತಿಮ್ಮೇಗೌಡನನ್ನು ಬಹು ಶ್ಲಾಘಿಸಿ ಗೌರವಿಸಿದರು. ಅಲ್ಲದೆ "ಗೌಡರೇ ಇಂತಹ ಕಟ್ಟಡವನ್ನು ವಿದ್ಯಾಮಂತ್ರಿಗಳ ಸಮ್ಮುಖ ದಲ್ಲಿ ತೆರೆದು, ಅದರ ಆರಂಭೋತ್ಸವವನ್ನು ನಡೆಸಬೇಕು. ನೀವೆಲ್ಲರೂ ಸ್ವಲ್ಪ ಶ್ರದ್ಧೆವಹಿಸಿದರೆ ಅದು ಸಾಧ್ಯ" ಎಂದು ಹುರಿದುಂಬಿಸಿದರು. ತಿಮ್ಮೇ ಗೌಡ ಸ್ವಲ್ಪ ಯೋಚಿಸಿ "ನಿಜ" ಎಂದ.

ಸ್ವಲ್ಪ ದಿನಗಳಲ್ಲಿಯೇ ಈ ವಿಚಾರ ಊರೆಲ್ಲಾ ಹಬ್ಬಿತು. ಉತ್ಸವದ ದಿನ ಎಲ್ಲೆಲ್ಲಿ ನೋಡಿದ್ದರೂ ಹುಡುಗರ ಸಡಗರ; ಹೆಂಗಸರ ಪಿಸುಮಾತು; ಗಂಡಸರ ಓಡಾಟ; ದೊಡ್ಡ ಹಸರುವಾಣಿ ಚಪ್ಪರ ಸಿದ್ಧವಾಯಿತು. ಮುಂಭಾ ಗದಲ್ಲಿ ಕಾಂತಿಕೊಡುವ ಬಾಳೆಯ ಕಂಬಗಳು, ಅದರಲ್ಲಿ ಜೋಲಾಡುವ ಗೊನೆಗಳು, ಚಪ್ಪರದ ಮಧ್ಯದಲ್ಲಿ ಕಂಗೊಳಿಸುವ ಹೂಗಳ ಗೊಂಚಲು. ಅಗ್ರಭಾಗದಲ್ಲಿ ದೊಡ್ಡ ವೇದಿಕೆ. ಅದರ ಮೇಲೆ ಸೊಗಸಾದ ಆಸನಗಳು.

ವಿದ್ಯಾಮಂತ್ರಿಗಳು, ಉನ್ನತಾಧಿಕಾರಿಗಳು, ಖಾಸಗಿ ದೊಡ್ಡ ಮನು ಷ್ಯರು, ಪ್ರಜಾಪ್ರತಿನಿಧಿ, ನ್ಯಾಯವಿಧಾಯಕ ಸಭಾಸದಸ್ಯರು ಮೊದಲಾಗಿ ಅನೇಕರು ಪೀಠಗಳನ್ನು ಅಲಂಕರಿಸಿದರು. ಬಿನ್ನವತ್ತಳೆ, ಭಾಷಣ, ಸಂಗೀತ ಎಲ್ಲವೂ ನಿರ್ವಿಘ್ನವಾಗಿ ನಡೆದುವು.

ಮರುದಿನವೇ ವೃತ್ತಪತ್ರಿಕೆಗಳಲ್ಲಿ ಈ ವೃತ್ತಾಂತ ಬೆಳಕಿಗೆ ಬಂತು. ತಿಮ್ಮೇಗೌಡನ ಕೀರ್ತಿ ಹೆಚ್ಚಿತು. ಎಲ್ಲರೂ ತಿಮ್ಮೇಗೌಡನನ್ನು ಕೊಂಡಾಡಿ

ದರು. ಈ ರೀತಿ ಕೀರ್ತಿಯನ್ನು ಗಳಿಸಿದ ಪಟೇಲ್ ತಿಮ್ಮೇಗೌಡನನ್ನು ಕಂಡು ಮುನೇಗೌಡ ಕೊರಗಿದ. ಅವನಿಗೆ ಅಸೂಯೆ ಹೆಚ್ಚಾಯಿತು. ಹಳ್ಳಿಯ ಅಜ್ಞಾನಿಗಳಿಗೆ "ಯಾರೂ ಮಕ್ಕಳನ್ನು ಆ ಶಾಲೆಗೆ ಕಳುಹಿಸಬೇಡಿ" ಎಂದು ಪ್ರೋತ್ಸಾಹಿಸಿದ. ಹಲವರು ನಂಬಿದರು. ಆದರೆ ಪಾಠಶಾಲೆಯು ಕ್ಷೀಣ ಗತಿಗೆ ಬರಲಿಲ್ಲ. ದಿನೇ ದಿನೇ ಅಭಿವೃದ್ಧಿಗೆ ಬಂದೇ ಬಂತು. ಈ ಶಾಲೆಯ ಉಪಾಧ್ಯಾಯ ಬಹು ಯುಕ್ತಿಪರ; ಬುದ್ಧಿಶಾಲಿ; ಬರುವ ಸಂಬಳ ಅಲ್ಪ ವಾದರೂ ಬಹು ಚೆನ್ನಾಗಿಯೇ ಬಾಳುತ್ತಿದ್ದ. ವೈದ್ಯ, ಸಂಗೀತ, ಜ್ಯೋತಿಷ್ಯ ಇವುಗಳಲ್ಲಿ ಬಹಳ ನಿಪುಣ. ರೈತರನ್ನೆಲ್ಲಾ ತನ್ನ ವಶದಲ್ಲಿಟ್ಟುಕೊಂಡಿದ್ದ. ಆದಕಾರಣ ಮುನೇಗೌಡನ ಪೌರುಷ ಇವನ ಮುಂದೆ ನಡೆಯಲಿಲ್ಲ.

ಇದನ್ನರಿತು ಮುನೇಗೌಡ ತಕರಾರು ಅರ್ಜಿಗಳನ್ನು ಬರೆಯಿಸಿ, ಆಫೀಸುಗಳಿಗೆ ಕಳುಹಿಸಿದ. ಇಲ್ಲದ ಸಲ್ಲದ ಚಾಡಿ ಮಾತುಗಳನ್ನು ಅಧಿ ಕಾರಿಗಳಿಗೆ ಹೇಳಿದ. ಪಟೇಲ್ ತಿಮ್ಮೇಗೌಡನ ಮೇಲೆ ದೂರು ಹೇಳಿದ. "ಅವನು ಸ್ಕೂಲ್ ಕಟ್ಟಿಸಿರುವುದು ತನ್ನ ಗ್ರಾಮದ ಮಕ್ಕಳಿಗೋಸ್ಕರ ಅಲ್ಲ. ಅದರ ನೆಪದಲ್ಲಿ ಸರ್ಕಾರದ ಅಧಿಕಾರಿಗಳ ಪ್ರೀತಿಯನ್ನು ಗಳಿಸಿ ತನ್ನ ಅಳಿಯನಿಗೆ ಅಮಲ್ದಾರಿ ಕೊಡಿಸಬೇಕು - ಅಂತ" ಎಂಬುದಾಗಿ ಕತೆ ಕಟ್ಟಿದ. ಕೆಲವು ಅಧಿಕಾರಿಗಳು ಎಲ್ಲರೂ ನಿಜವೇನೋ ಅಂದುಕೊಂಡರು. ಆದರೆ ಪಟೇಲ್ ತಿಮ್ಮೇಗೌಡನ ಹೃದಯದ ಆಳವನ್ನು ಬಲ್ಲವರು ಮಾತ್ರ ಖಂಡಿತವಾಗಿಯೂ ನಂಬುತ್ತಿರಲಿಲ್ಲ.

ಕೆಲವು ದಿನಗಳು ಕಳೆದ ಬಳಿಕ ಅಕ್ಷರ ಪ್ರಚಾರ ಸಮಿತಿಯವರು ಏರ್ಪಡಿಸಿರುವ ರಾತ್ರಿ ಪಾಠಶಾಲೆಗಳ ಪದ್ಧತಿಯನ್ನು ಜಾರಿಗೆ ತರಬೇಕೆಂದು ಹಲವರು ಹವಣಿಸಿದರು. ಗ್ರಾಮದ ಮುಖಂಡರು "ರಾತ್ರಿ ಸ್ಕೂಲ್ ಬೇಕೇ ಬೇಕು" ಎಂದರು. ಅವರಲ್ಲಿ ಒಬ್ಬ "ಮುನೇಗೌಡನನ್ನು ಕೇಳಿರಪ್ಪ, ಅವನು ಕೋಪಿಸಿಕೊಂಡಾನು. ಹಿಂದೆ ನಾವು ಅವನನ್ನು ಕೇಳದೇ ಹೋದುದಕ್ಕೆ ಸುಳ್ಳು ಸುದ್ದಿ ಹರಡಿಸಿ ಊರು ಬೇರೆ ಮಾಡಿದ. ಈಗಲಾದರೂ ಒಂದು ಮಾತು ಕೇಳಿ" ಎಂದು ಸಲಹೆ ಕೊಟ್ಟ. ಇನ್ನಿಬ್ಬರು "ಹೌದು" ಎಂದರು. ಸರಿ, ಮುನೇಗೌಡನನ್ನು ಕೇಳಿದರು. ಅವನು "ನಮ್ಮ ಹಳ್ಳಿಯ ನಾಯಕ ತಿಮ್ಮೇಗೌಡ ಇದ್ದಾನಲ್ಲ ಅವನು ಏನನ್ನುತ್ತಾನೆ"? ಎಂದು ಕೇಳಿದ.

ಒಬ್ಬ ಮುಖಂಡ (ಸ್ವಲ್ಪ ಯೋಚಿಸಿ) "ಗೌಡನಿಗೆ ರಾತ್ರಿ ಪಾಠಶಾಲೆ ಇಷ್ಟ ವಿಲ್ಲ. ಹಗಲಿನಲ್ಲಿ ನಡೆಯುವ ಸ್ಕೂಲೇ ಸಾಕಂತೆ" ಎಂದು ಉತ್ತರಕೊಟ್ಟ. ಮುನೇಗೌಡ "ಹಾಗಾದರೆ ರಾತ್ರೆ ಸ್ಕೂಲ್ ನಡೀಲಿ ನಾನೂ ಬರ್ತೀನಿ" ಎಂದ. ಊರಲ್ಲೆಲ್ಲಾ ಮುತುವರ್ಜಿ ವಹಿಸಿದರು. ಮುನೇಗೌಡ ಗ್ರಾಮ ಪಂಚಾಯಿತಿಯಿಂದ ಸ್ವಲ್ಪ ಹಣವನ್ನು ರಾತ್ರೆ ಪಾಠಶಾಲೆಯ ಖರ್ಚಿಗೆ ಕೊಡಿಸಬೇಕೆಂದು ಅಮಲ್ದಾರ್‌ರವರಿಗೆ ಅರ್ಜಿ ಕೊಟ್ಟ. ಅಮ ಲ್ದಾರರು ಎಷ್ಟು ತಿಂಗಳುಗಳಾದರೂ ಉತ್ತರವನ್ನೇ ಕೊಡಲಿಲ್ಲ. ಈ ವಿಷಯವನ್ನು ತಿಳಿದು "ರಾತ್ರೆ ಪಾಠಶಾಲೆಯ ಪುಸ್ತಕ ಭಂಡಾರ ನನ್ನ ಜವಾಬ್ದಾರಿ, ಅದಕ್ಕಾಗುವ ವೆಚ್ಚ ನಾನೇ ಕೊಡುತ್ತೇನೆ" ಎಂದ. ಪುಸ್ತಕ ಭಂಡಾರ, ವಾಚನಾಲಯ, ಒಂದು ಮಕ್ಕಳ ಶಾಲೆ, ಆಟದ ಬಯಲು, ಎಲ್ಲವೂ ಆ ಗ್ರಾಮಕ್ಕೆ ಒದಗಿತು. ಕಾಡಹಳ್ಳಿ ಗೌಡನ ಕೀರ್ತಿ ಹೆಚ್ಚಿತು. ಎಲ್ಲರೂ ಅವನನ್ನು ಕೊಂಡಾಡಿದರು.

o o o o

ನಾನೊಂದು ದಿನ ಹಳ್ಳಿಗಾಡಿನಲ್ಲಿ ಸಂಚಾರ ಹೊರಟಾಗ ಈ ಗ್ರಾಮಕ್ಕೆ ಬಂದೆ. ಒಬ್ಬ ಹುಡುಗ ಪಟೇಲರ ಮನೆಯನ್ನು ತೋರಿಸಿದ. ಪಟೇಲ್ ತಿಮ್ಮೇಗೌಡರು ಒಂದೆರಡು ನಿಮಿಷಗಳಲ್ಲಿ ಸ್ಕೂಲ್ ಇತಿಹಾಸ ವನ್ನು ಹೇಳಿದರು. ನನಗೆ ಬಹಳ ಸಂತೋಷವಾಯಿತು. ಮುನೇಗೌಡ ನನ್ನು ನೋಡಬೇಕು ಎನ್ನಿಸಿತು. ಆದರೆ ಊರಿನಲ್ಲಿ ಇರಲಿಲ್ಲ. ತನ್ನ ಸ್ವಂತ ಕೆಲಸಕ್ಕಾಗಿ ಮೈಸೂರಿಗೆ ಹೊರಟುಹೋಗಿದ್ದ. ನಾನು ಕಾಡ ಹಳ್ಳಿಗೌಡ ಕಟ್ಟಿಸಿದ ಪಾಠಶಾಲೆ, ಮುನೇಗೌಡನ ಪುಸ್ತಕ ಭಂಡಾರ, ಗ್ರಾಮಸ್ಥರ ಪಂಚಾಯಿತಿ ಮಂದಿರ - ಎಲ್ಲವನ್ನೂ ನೋಡಿ ಹರ್ಷಗೊಂಡೆ. ಆಗ "**ಅಸೂಯೆ ಅಳಿದರೆ ಗ್ರಾಮದ ಏಳಿಗೆ ಖಂಡಿತ**" ಎಂದು ನನ್ನ ಅಂತರಾತ್ಮ ನುಡಿಯಿತು.



# ನನಗೂ ಓದೋಕೆ ಬಂದಿದ್ದರೆ?

———::———

ಪಾಳ್ಯದ ಪಟೇಲ್ ಪಾಪಯ್ಯ ನಮ್ಮ ತಾಲ್ಲೂಕಿನಲ್ಲೆಲ್ಲಾ ಹೆಸರುವಾಸಿ; ಭಾರೀ ಕುಳ. ಇವನ ಹೆಸರು ಹೇಳಿದರೆ ಸಾಕು. ಊರಿಗೆ ಊರೇ ನಡುಗುತ್ತಿತ್ತು. ಯಾರು ಬಂದರೂ ಇವನನ್ನು ಭೇಟಿ ಮಾಡದೆ ಹೋಗುತ್ತಿರಲಿಲ್ಲ. ಸರ್ಕಾರದ ಅಧಿಕಾರಿಗಳೂ ಸಹ ಈತನಲ್ಲಿ ಒಂದು ವಿಧವಾದ ಗೌರವವನ್ನಿಟ್ಟಿದ್ದರು.

ಇಂತಹ ಪಟೇಲನಿದ್ದ ಗ್ರಾಮಕ್ಕೆ ಒಂದು ಪಾಠಶಾಲೆ ಇರಲಿಲ್ಲ. ಅದೊಂದೇ ಆ ಗ್ರಾಮಕ್ಕೆ ಕೊರತೆ. ಕುಡಿಯುವುದಕ್ಕೆ ಒಂದು ನೀರಿನ ಭಾವಿ, ಪೂಜೆ ಮಾಡಲು ಒಂದು ದೇವಾಲಯ, ಪ್ರದಕ್ಷಿಣೆ ಹಾಕಲು ಒಂದು ಅಶ್ವತ್ಥಕಟ್ಟೆ, ಮಕ್ಕಳ ಆಟಕ್ಕೆ ಒಂದು ವಿಶಾಲವಾದ ಬಯಲು, ಇವೆಲ್ಲಕ್ಕೂ ಅತಿಮುಖ್ಯವಾದ ಒಂದು ಮಕ್ಕಳ ಪಾಠಶಾಲೆ, ಇನ್ನೊಂದು ವಯಸ್ಕರ ರಾತ್ರಿ ಪಾಠಶಾಲೆ, ಜೊತೆಗೆ ಒಂದು ಚಿಕ್ಕ ಪುಸ್ತಕ ಭಂಡಾರ ಇಷ್ಟು ಇದ್ದರೆ ಆ ಗ್ರಾಮ ಮಾದರಿಯಾಗದೆ ಮತ್ತೇನು? ಊರಿನ ಜನ ತಾವಾಗಿಯೇ ಮುಂದುವರಿಯುತ್ತಾರೆ. ಆಗ ಉಪನ್ಯಾಸವೂ ಬೇಡ, ಉಪದೇಶವೂ ಬೇಡ.

ಈ ಗ್ರಾಮಕ್ಕೆ ಪಾಠಶಾಲೆ ಇಲ್ಲದೇ ಹೋದದ್ದು ಕೆಲಸಗಾರನಾದ ರೈತನಿಗೆ ಎತ್ತಿನ ಗಾಡಿಯಿಲ್ಲದಂತೆ. ಆ ವಿಷಯವನ್ನು ಪಾಪಯ್ಯ ತಿಳಿಯದೇ ಹೋದ. ತುಂಬಾ ಶೋಚನೀಯ. ಯಾರಾದರೂ ಕೇಳಿದರೆ ಅವನು "ಸ್ವಾಮಿಾ ನಿಮ್ಗೇನು ಗೊತ್ತು? ಈ ಕಾಲದಲ್ಲಿ ಹೊಲಾ ಉಳೋ ದಡ್ಡರಿಗೆಲ್ಲಾ ಓದು ಬರಾ ಕಲಿಸಿಕೊಟ್ಟರೆ ಅವರು ಬೇಸಾಯ ಬಿಟ್ಟು ಬಿಡುತ್ತಾರೆ. ಅಂದವಾಗಿ ಬಟ್ಟೆ ಬರೆ ಹಾಕ್ಕೊಂಡು ಊರೆಲ್ಲಾ ಗಸ್ತು ಹೊಡೀತಾರೆ" ಎಂದು ಹೇಳುತ್ತಿದ್ದ. ಒಂದು ಸಲ ನನ್ನ ಪ್ರಶ್ನೆಗೂ ಇದೇ ಉತ್ತರ ಬಂತು. ಆದಕಾರಣ ಇವನಿಗೆ ಒಂದು ಪಾಠ ಕಲಿಸಬೇಕು ಎನ್ನಿಸಿತು.

ಒಂದು ದಿನ ಅಮಲ್ದಾರ್ ಸಾಹೇಬರು ಈ ಗ್ರಾಮಕ್ಕೆ ದಯ ಮಾಡಿಸಿದರು. ಅವರೊಡನೆ ನಾನೂ ಇದ್ದೆ. ಕಂದಾಯ - ತಕರಾರು - ಜುಲ್ಮಾನೆ - ಎಲ್ಲ ಮಾತುಗಳೂ ಆಯಿತು. ಅಮಲ್ದಾರರು ನಗುತ್ತಾ "ಏನ್ರೀ ಪಟೇಲರೆ ನಿಮ್ಮ ಜೇಬಿನಲ್ಲಿ ಏನೋ ಒಂದು ಪತ್ರಿಕೆ ಇದ್ದ ಹಾಗೆ ಇದೆ, ಇಲ್ಲಿ ಸ್ವಲ್ಪ ಕೊಡಿ. ಪೇಪರ್ ಓದಿ ಮೂರು ದಿನವಾಯಿತು" ಎಂದು ಕೇಳಿದರು. ಪಾಪಯ್ಯ ಸ್ವಲ ನಾಚಿದವನಂತೆ ತಲೆತಗ್ಗಿಸಿ "ಅದು ಪರ್‌ಜಾಮಿತ" ಎಂದ. ಅಮಲ್ದಾರರು ನಗುತ್ತಾ "ಅದೆಂತಾ ಪೇಪರಪ್ಪಾ ಅದು, ಕೊಡಿ ನೋಡೋಣ" ಎಂದರು. ಅವನು ಪತ್ರಿಕೆಯನ್ನು ಹೊರಕ್ಕೆ ತೆಗೆದ. ನಾನೂ ನೊಡುತ್ತಲೇ ಇದ್ದೆ. ಅಮಲ್ದಾರರು "ಇದು ದೇಶಬಂಧು ಪತ್ರಿಕೆ, ಪ್ರಜಾಮಿತ ಅಂತಾ ಹೇಳಿದಿರಿ" ಎಂದು ಸ್ವಲ್ಪ ಜಬರದಸ್ತಿನಿಂದ ಹೇಳಿದರು. ಪಾಪಯ್ಯ ಕೈಗಳನ್ನು ಚುರುಕು ಮಾಡಿ, ಮತ್ತೊಂದು ಜೇಬಿನಿಂದ ಪ್ರಜಾಮಿತವನ್ನೇ ತೆಗೆದ. ನಾನು "ಏನ್ರೀ ಪಾಪಯ್ಯನವರೆ ಬಹಳ ಹಳೇ ಪೇಪರ್ ಕೊಡುತ್ತಿದ್ದೀರಲ್ಲ. ನಿನ್ನೆ ತಾಯಿ ನಾಡು ಇದ್ದರೆ ಕೊಡ್ರಿ" ಎಂದು ಕೇಳಿದೆ. ಅವನು ಹಿಂದು ಮುಂದು ನೋಡಿ, "ಸ್ವಾಮಿ ನಂಕೆ ಓದು ಬರೋಕಿಲ್ಲ. ಇಗೋ ನನ್ತಾವ ಇರೋ ಪೇಪರೆಲ್ಲಾ ಇಲ್ಲಿ ಹಾಕಿಬಿಡ್ತೀನಿ. ತಾಯಿನಾಡು ಯಾವುದೋ, ದೇಶ ಬಂಧು ಯಾವುದೋ" ಎಂದು ಹೇಳಿ ಹತ್ತಾರು ಪತ್ರಿಕೆಗಳನ್ನು ಮುಂದೆ ಹಾಕಿದ. ಅಮಲ್ದಾರರು ನಗುತ್ತಾ "ಓಹೊ! ಪಟೇಲರ ಜೇಬೇ ರೀಡಿಂಗ್ ರೂಮ್! ನೋಡಿ ಚೆನ್ನಾಗಿ ಇನ್ನೂ ಏನಾದರೂ ಇಟ್ಟಿದ್ದೀರೇನೋ?" ಎಂದರು. ಪಾಪಯ್ಯ ನಮ್ರಭಾವದಿಂದ "ಪೇಪರು ಪೋಸ್ಟ್ನಲ್ಲಿ ಬರೋದು ಸ್ವಾಮಿ, ಬಂದದ್ನೆಲ್ಲಾ ಈ ಜೇಬಿನೊಳಗೇ ಹಾಕಿಬಿಡ್ತೀನಿ. ಈಚೆ ಹಾಕಿದರೆ ಮಕ್ಕಳು ಹರಿದುಹಾಕ್ತವೆ" ಎಂದ. ಅಲ್ಲಿದ್ದವರೆಲ್ಲಾ ನಕ್ಕರು. ಪಾಪಯ್ಯ ಮಾತ್ರ ನಗಲಿಲ್ಲ.

ಅಮಲ್ದಾರರಿಗೂ ನನಗೂ ಇದೇ ವಿಷಯವಾಗಿ ಸ್ವಲ್ಪ ಸಂವಾದ ನಡೆಯಿತು. ಅವರು ಹೇಳಿದರು: "ರೈತಾಪಿ ಜನರು ತಮ್ಮ ಮನೆಗಳಲ್ಲಿ ಪತ್ರಿಕೆಗಳನ್ನಾಗಲಿ ಪುಸ್ತಕಗಳನ್ನಾಗಲಿ ಇಡುವುದಕ್ಕೆ ಸರಿಯಾದ ಸ್ಥಳವನ್ನೇ ಮಾಡಿಕೊಂಡಿರುವುದಿಲ್ಲ. ಅದಕ್ಕೇ ಹೀಗೆಲ್ಲಾ ಮಾಡುತ್ತಾರೆ" ಎಂದರು,

ನಾನು ಈ ಮಾತನ್ನು ಅಷ್ಟಾಗಿ ಒಪ್ಪಲಿಲ್ಲ. ಅವರು ಹೇಳುವುದು ನೂರಕ್ಕೆ ನೂರು ಭಾಗ ಸುಳ್ಳೆಂದು ಹೇಳಲಾರೆ. ಅವರು ಹೇಳುವುದರಲ್ಲೂ ಸತ್ಯಾಂಶವಿದೆ. ಆದ್ದರಿಂದ ನಾನು "ಬಹಳ ಮಂದಿ ತಮ್ಮ ಮನೆಗಳನ್ನು ಮನುಷ್ಯನ ವಾಸಕ್ಕೆಂದು ಕಟ್ಟಿರುವುದೇ ಇಲ್ಲ. ಅವು ದನಗಳ ದೊಡ್ಡಿ ಗಳಂತೆ ಇರುತ್ತವೆ. ಪತ್ರಿಕೆಗಳನ್ನು ತರಿಸುವವರು ಸಾಮಾನ್ಯವಾಗಿ ಶ್ರೀಮಂತರೇ. ಅಲ್ಲದೇ ತಮಗೆ ತಿಳಿದ ಹಾಗೆ ಸ್ವಂತ ಖರ್ಚಿನಿಂದ ಪತ್ರಿಕೆ ಗಳನ್ನು ತರಿಸುವವರು ವಿರಳ. ಗ್ರಾಮಪಂಚಾಯಿತಿ ಮೂಲಕ ಪತ್ರಿಕೆ ತರಿಸುವವರೇ ಬಹಳ. ಮತ್ತೆ ಕೆಲವರು ಹತ್ತಾರು ಜನರಿಂದ ತಲಾ ನಾಲ್ಕಾಣೆಯಂತೆ ಚಂದಾ ವಸೂಲ್ಮಾಡಿ ಒಂದು ಪತ್ರಿಕೆಯನ್ನು ತರಿಸು ತ್ತಾರೆ. ಆ ಗ್ರಾಮದ ಉಪಾಧ್ಯಾಯನೋ, ಶಾನುಭೋಗನೋ ಓದು ಬಲ್ಲ ಒಬ್ಬ ರೈತನೋ ಯಾರಾದರೂ ಓದುತ್ತಾನೆ. ಅವನ ಸುತ್ತಲೂ ಹಲವರು ಕುಳಿತಿರುತ್ತಾರೆ. ಆದರೆ ಕೆಲವರು ಆ ಪತ್ರಿಕೆಯನ್ನು ಹೀಗೆ ದಿನವೂ ಓದುವವರ ಕೈಗೆ ಕೊಡುವುದೇ ಇಲ್ಲ. ತಮ್ಮ ವಿಳಾಸ ಮುದ್ರಿತ ವಾಗಿರುವ ಸುತ್ತುಪಟ್ಟಿಯೊಡನೆ ಆ ಪತ್ರಿಕೆಯನ್ನು ತಮ್ಮ ಕಿಸೆಯಲ್ಲಿಯೇ ಇಟ್ಟುಕೊಂಡಿರುತ್ತಾರೆ. ಅರಿಯದ ಆ ಗ್ರಾಮವಾಸಿಗಳಿಗೆ ಅದನ್ನು ಆಗಾಗ ತೋರಿಸುತ್ತಲೇ ಇರುತ್ತಾರೆ. 'ಇದರಲ್ಲಿ ಹೀಗಿದೆ, ಅದರಲ್ಲಿ ಹಾಗಿದೆ. ಈ ಪತ್ರಿಕೆ ಸಮಾನ ಯಾವುದೂ ಇಲ್ಲ. ಇದರಲ್ಲಿ ಚಿತ್ರ ಗಳಿವೆ. ಅದರಲ್ಲಿ ಕೆಟ್ಟುಹೋದ ಅಕ್ಷರಗಳಿವೆ' ಎಂದು ಮುಂತಾಗಿ ಟೀಕೆ ಮಾಡುತ್ತಾರೆಯೇ ಹೊರತು ಸುದ್ದಿಯೊಂದನ್ನೂ ಅವರು ಹೇಳುವುದಿಲ್ಲ. ಹೀಗಿದೆ ಸದ್ಯದ ಸ್ಥಿತಿ" ಎಂದು ಹೇಳಿದೆ. ಅವರು "ನಿಜ ನೀವು ಹೇಳು ವದು ವಾಸ್ತವ" ಎಂದರು.

ಪಾಪಯ್ಯ ಈ ಮಾತುಗಳನ್ನೆಲ್ಲಾ ಕೇಳಿಸಿಕೊಂಡ. ತನ್ನಲ್ಲಿ ತಾನೇ "ನನಗೂ ಓದೋಕೆ ಬಂದಿದ್ದರೆ" ಎಂದುಕೊಂಡ. ನಾನು ಪಾಪಯ್ಯನ ಪೆಚ್ಚುಮೋರೆಯನ್ನು ನೋಡಿ "ಪಟೇಲರೇ, ಈಗಲಾದರೂ ಒಂದು ಸ್ಕೂಲಿಗೇರ್ಪಾಟು ಮಾಡಿ. ಸ್ಕೂಲ್ ಇನ್ಸ್ಪೆಕ್ಟರು ಬಹಳ ಒಳ್ಳೆಯವರು. ತಕ್ಷಣ ಕೆಲಸ ಮಾಡಿಕೊಡುತ್ತಾರೆ. ಅಮಲ್ದಾರರೂ ಸಹಾಯ ಮಾಡು ತ್ತಾರೆ" ಎಂದೆ. ಪಟೇಲ್ ಪಾಪಯ್ಯ ಮರುಮಾತನಾಡದೆ "ಆಗಲಿ.

ಸ್ವಾಮಿಾ, ಸ್ಕೂಲ್ ಕಟ್ಟಡ ಕಟ್ಟಿಸ್ತೀನಿ. ಶಂಖುಸ್ಥಾಪನೆಗೆ ವಿದ್ಯಾಮಂತ್ರಿಗಳನ್ನೇ ಕರೆಸೋಣ" ಎಂದು ಮಾತುಕೊಟ್ಟ.

o o o o

ಪಟೇಲ್ ಪಾಪಣ್ಣನ ಹಿರಿಯ ಮಗಳು ದೊಡ್ಡವಳಾಗಿ ಒಂದು ವರ್ಷ ಆಗಿತ್ತು. ಪಾಪಯ್ಯನಿಗೆ ಅವಳ ಮದುವೆ ಚಿಂತೆ ಬಹಳ ಹೆಚ್ಚಿದ್ದರೂ ಅದನ್ನು ತೋರ್ಪಡಿಸುತ್ತಿರಲಿಲ್ಲ. ಏಕೆಂದರೆ ಹೆಣ್ಣಿಗಾಗಿ ಗಂಡಿನವರು ತಾವಾಗಿಯೇ ಬರುವರೆಂದು ಅವನಿಗೆ ಗೊತ್ತು. "ಏನಯ್ಯ ಪಾಪಯ್ಯ, ಮಗಳ ಮದುವೆ ಯಾವಾಗ?" ಎಂದು ಕೇಳಿದರೆ, "ನಾವೇನು ಐನೋರುಗಳೇ, ವರದಕ್ಷಿಣೇ ತಕ್ಕೊಂಡು ಹೆಣ್ಣು ಸಂಪಾದಿಸೋಕ್ಕೆ? ಬಿಡಿ ಸ್ವಾಮಿ, ನೆರವಾದಿ ಆದ ಹುಡುಗೀನ ಯಾವೊನು ಒಲ್ಲೆ ಅಂತಾನೆ" ಎಂದುಬಿಡುತ್ತಿದ್ದ.

ನನಗೆ ಒಂದು ದಿನ ಆ ಹಳ್ಳಿಯಲ್ಲಿ ಯಾವುದೋ ಒಂದು ಕೆಲಸ ಬಿತ್ತು. ಅದಕ್ಕಾಗಿ ಹೋಗಿದ್ದೆ. ಪಟೇಲ ಸಿಕ್ಕಿದ. ಆ ಮಾತು ಈ ಮಾತು ಆಡುತ್ತಾ ಮಗಳ ಲಗ್ನದ ವಿಚಾರಕ್ಕೂ ಬಂತು. "ಏನು ಪಟೇಲರೇ ಏನು ವಿಚಾರ?" ಎಂದೆ.

"ಅದೇ ನನ್ಮಗಳ ಲಗ್ನದ ವಿಚಾರ."

"ಯಾರಿಗೆ ಕೊಡ್ತೀರಿ?"

"ಪಕ್ಕದ ಹಳ್ಳಿ, ಗೌಡರ ಹಿರೇ ಮಗನಿಗೆ."

"ಅವನು ಏನು ಕಸಬು ಇಟ್ಟುಕೊಂಡಿದ್ದಾನೆ?"

"ಕಸಬೇನು? ಯಥಾಪ್ರಕಾರ ಆರಂಭ."

"ಅವನೇನು ವಿದ್ಯಾವಂತನೋ ದಡ್ಡನೋ?"

ದಡ್ಡ ಏಕಾದಾನು ಸ್ವಾಮಿಾ, ಅದೆಂತದೋ ಕಾಲೇಜು ಐತಲ್ಲಾ ಬೆಂಗಳೂರಲ್ಲಿ ಕೋರ್ಟಿನ ಮಗ್ಗುಲಲ್ಲಿ ಅಲ್ಲಿ ಓತ್ತಾ ಅವನೆ."

"ಓಹೋ! ತಿಳಿಯಿತು. ಇಂಟರ್ ಮಿಾಡಿಯಟ್! ಸರಿ, ಸರಿ."

"ಅದೇ ಅದೇ ಸ್ವಾಮಿಾ."

ಈ ವಿಷಯಗಳನ್ನು ಹೇಳುವಾಗ ಪಾಪಯ್ಯ ರಬ್ಬರ್ ಚೆಂಡಿನಂತೆ ಉಬ್ಬಿ ಹೋಗಿದ್ದ. ಹಿಗ್ಗಿ ಹೀರೆಕಾಯಿ ಆಗಿದ್ದ. ಒಂದು ಕ್ಷಣ ತನ್ನನ್ನು

ತಾನೇ ಮರೆತ. ತನ್ನ ಅಳಿಯ ಮುಂದೆ ಬಿ.ಎ. ಮಾಡಿ ಅಮಲ್ದಾರಿ ಮಾಡ್ತಾನೆ ಎಂಬ ಹೊಂಗನಸನ್ನು ಅಲ್ಲಿಯೇ ಕಂಡ. ನಾನು "ಅಲ್ರೀ, ಪಟೇಲರೇ-ಓದು ಬರಾ ಕಲೀಕೂಡದು ಒಕ್ಕಲಿಗರು ಅಂತ ಹೇಳೋರು ವಿದ್ಯಾವಂತರಿಗೆ ಯಾಕೆ ಹೆಣ್ಣು ಕೊಡ್ತೀರಿ?" ಎಂದು ಕೇಳಿದೆ. ಅವನು "ಅಲ್ಲಾ ಸ್ವಾಮಿ, ದಡ್ಡರಿಗೆ ಹೆಣ್ಣು ಕೊಡು ಅಂತ ನಾನು ಹೇಳಿದೆನೆಯೇ? ಓದು ಕಲಿತವರು ನಮ್ಮಂಥವರನ್ನು ಜಮಾ ಖರ್ಚಿಗೇ ಇಡೋದಿಲ್ಲ ಅಂತ ಅಲ್ಲವೆ ನಾನು ಹೇಳೋದು. ಇನ್ನೇನು ಓದು ಕಲೀಕೂಡದು ಅಂತ ಅಲ್ಲ. ಮೊನ್ನೆ ನೋಡೀ ಸ್ವಾಮಿ, ಸಣ್ಣಪ್ಪನ ಮಗ ಕಳಸಯ್ಯ ಗುಡ್ಡು ಲೋವರ್ ಸೆಕೆಂಡ್ರಿ ಮಾಡಿಬಿಟ್ಟು ನನ್ಮೇಲೆ ಇಲ್ಲದ ಪುಕಾರ ಹುಟ್ಸಿಸಿ, ಸಬ್ ಡಿವಿರ್ಜ ತನಕ ಗಲಾಟೆ ಮಾಡಿಬಿಟ್ಟ; ಆ ತಿಮ್ಮನ ತಮ್ಮ ನರಸ ನಾಲ್ಕಕ್ಷರ ಬರ್‍ತೈತೇಂತ ಹೊಲ ಉಳೋದೇ ಬಿಟ್ಟುಬಿಟ್ಟ. ಹೀಗಾದರೆ ಬೇಸಾಯ ಬಲು ಚೆಂದಾಗಿ ಆಗ್ತೈತೆ." ಈ ಮಾತು ಕೇಳಿ ನನಗೂ ಸ್ವಲ್ಪ ಸಂಕಟವಾಯಿತು. "ಅಲ್ಪ ಸ್ವಲ್ಪ ಓದು ಕಲಿತವರ ಪಾಡೇ ಇಷ್ಟು. ಅತ್ತ ವಿದ್ಯಾವಂತರ ಜಾತಿಗೂ ಸೇರಲಿಲ್ಲ. ಇತ್ತ ವ್ಯವಸಾಯಗಾರರ ಜಾತಿಗೂ ಸೇರಲಿಲ್ಲ" ಎನ್ನಿಸಿತು. ಪಾಪಯ್ಯ ಪ್ರೀತಿಯಿಂದ ನನ್ನನ್ನು ಮನೆಗೆ ಬರ ಹೇಳಿದ. ಅವನ ಮನೆಗೆ ಹೋದೆ. ಮನೆಯಲ್ಲಿದ್ದ ಎತ್ತುಗಳು, ಹಸುಗಳು, ಎಮ್ಮೆಗಳು, ಕುರಿಮಂದೆ ಎಲ್ಲವನ್ನೂ ಕಂಡು "ಇದಕ್ಕಿಂತಲೂ ಆಸ್ತಿಯೆ?" ಎಂದೆ. ಅವನು "ಮೋಟಾರು, ಮೇಜು, ಕುರ್ಚಿ, ಇಲ್ಲವಲ್ಲಾ" ಎಂದ. ನಾನು "ಅಯ್ಯೋ ಪಾಪಯ್ಯ! ಪಶುಸಂಪತ್ತೇ ಸಂಪತ್ತು. ಇದು ಬೆಳೆಯುವ ಆಸ್ತಿ. ಮೋಟಾರು ಮರಿಗಳನ್ನು ಹಾಕುತ್ತದೇನು? ಅಥವಾ ಅದರ ಬೆಲೆ ಏನಾದರೂ ಹೆಚ್ಚುತ್ತದೇನು? ಆದರೆ ನಿನ್ನ ಹಸುಗಳು, ಕುರಿಗಳು, ಮೇಕೆಗಳು ಕಾಲ ಹೆಚ್ಚಿದಷ್ಟೂ ಹೆಚ್ಚು ಮರಿಗಳನ್ನು ಕೊಡುತ್ತವೆ. ಅದಕ್ಕೆ ತಕ್ಕಂತೆ ಬೆಲೆಗಳನ್ನು ಕೊಡುತ್ತವೆ. ಹೌದೋ ಅಲ್ಲವೊ ಯೋಚಿಸಿ ನೋಡು" ಎಂದೆ.

ಪಾಪಯ್ಯ ನಸುನಗುತ್ತಾ ಒಳಕ್ಕೆ ಹೋಗಿ ಕೆಂಡದ ಮೇಲೆ ಕಾಯುವುದಕ್ಕೆ ಇಟ್ಟಿದ್ದ ಬಿಸಿ ಬಿಸಿ ಹಾಲನ್ನೂ, ಆಲೆಮನೆಯ ಬಿಳಿಯ ಎಳೆಯ ಬೆಲ್ಲವನ್ನೂ ತಂದ. ಎರಡನ್ನೂ ಮಿಶ್ರಮಾಡಿ ಬಹು ಸಂತೋಷದಿಂದ

ಪಾನಮಾಡಿದೆ. ಸ್ವರ್ಗದಲ್ಲಿನ ಅಮೃತಕ್ಕಿಂತಲೂ ಇದೇನೂ ಕಡಿಮೆ ಯಾಗಿರಲಿಲ್ಲ.

ಉಪಚಾರದ ಮಾತುಗಳಾಯಿತು. ನಾನು ಮೇಲೆದ್ದು "ಹೋಗಿ ಬರುತ್ತೇನೆ ನಮಸ್ಕಾರ" ಎಂದೆ. ಅವನೂ ಕೈ ಮುಗಿದ. ಅಲ್ಲಿಂದ ಹೊರಟು ನಮ್ಮೂರಿಗೆ ಬಂದೆ.

o o o o

ಒಂದು ತಿಂಗಳು ಕಳೆಯಿತು. ನಮ್ಮ ಮನೆಗೆ ಲಗ್ನದ ಪತ್ರಿಕೆ ಬಂತು. ನೋಡಿದೆ, ಓದಿದೆ. ಸಂತೋಷವಾಯಿತು. ಗ್ರಾಮಾಂತರ ದವರೂ ಇಷ್ಟು ಚೆನ್ನಾಗಿ ಲಗ್ನಪತ್ರಿಕೆಯನ್ನು ಮಾಡಿಸಿದ್ದಾರಲ್ಲಾ ಎಂದು ಕೊಂಡೆ. ಸರಿ ಮದುವೆಗೆ ಹೊರಟೆ. ವಿಜೃಂಭಣೆಯಿಂದ ವಿವಾಹ ಮಹೋತ್ಸವ ಸಾಗಿತು. ಶುಚಿರುಚಿಯಾದ ಅಡಿಗೆ ಮಾಡಿಸಿದ್ದರು. ಓಲಗ ಮೆರವಣಿಗೆ, ಸಮಾರಾಧನೆ, ದಕ್ಷಿಣೆ, ಎಲ್ಲವೂ ಮೇಲ್ಮಟ್ಟದಲ್ಲಿಯೇ ಇದ್ದುವು. ಖರ್ಚು ಸುಮಾರು ಆರೇಳು ಸಾವಿರ ಆಗಿರಬಹುದು. ಸರಿಯಾಗಿ ಗೊತ್ತಿಲ್ಲ. ಅಂತೂ ವೈಭವದ ಮದುವೆ. ರೇಷನ್ ಕಾಲದಲ್ಲಿಯೂ ನೂರಾರು ಮಂದಿ ಬಡಬಗ್ಗರಿಗೆ ಅನ್ನದಾನ.

o o o o

ಈಗ ಪಟೇಲ್ ಪಾಪಯ್ಯನ ಅಳಿಯ ಬಿ.ಎ., ಬಿ.ಎಲ್. ಪದವೀ ಧರ. ಲಾಯರ್ ಕೆಲಸಕ್ಕೆ ಕೈ ಹಾಕಿದ್ದಾನೆ. ಆದರೆ ಪಾಪಯ್ಯ ಪ್ರೊಬೇಷನರಿ ಅಸಿಸ್ಟೆಂಟ್ ಕಮಿಷನರ ಕೆಲಸ ಕೊಡಿಸಬೇಕೆಂದು ಹವಣಿ ಸುತ್ತಿದ್ದಾನೆ. ಯಾವುದೂ ಇತ್ಯರ್ಥವಾಗಲಿಲ್ಲ.

ಪಾಳ್ಯಕ್ಕೆ ಬಂದ ಅಧಿಕಾರಿಗಳಿಗೆಲ್ಲಾ ಬೇಕಾದಷ್ಟು ಮರ್ಯಾದೆ, ಉಪಚಾರ. ದಿವಾನರವರೆಗೂ ಇವನ ಹೆಸರು ಹೋಯಿತು. ಎಲ್ಲಾ ಅಧಿಕಾರಿಗಳಿಗೂ ಪರಿಚಿತನಾದ. ಹೂವಿನಹಾರ, ತೋರಣ, ಚಪ್ಪರ ಇವು ಗಳಲ್ಲಿ ಎತ್ತಿದ ಕೈ. ಆ ಪ್ರಾಂತದಲ್ಲಿ ಯಾರು ಚಪ್ಪರ ಹಾಕಬೇಕಾಗಿದ್ದರೂ ಪಾಪಯ್ಯನನ್ನೇ ಕರೆಯುತ್ತಿದ್ದರು. ಅಮಲ್ದಾರರ ದರ್ಜೆಗೆ ಖರ್ಚೆಷ್ಟು, ಡೆಪ್ಯುಟಿಕಮೀಷನರ ದರ್ಜೆಗೆ ಖರ್ಚೆಷ್ಟು, ಮಂತ್ರಿಗಳ ದರ್ಜೆಗೆ ಖರ್ಚೆಷ್ಟು, ಹೀಗೆಯೇ ಇವುಗಳ ಲೆಕ್ಕಾಚಾರದಲ್ಲಿ ನಿಸ್ಸೀಮನಾದ. ಇಷ್ಟಾದರೂ

ಅಳಿಯನಿಗೆ ಆರ್ಡರ್ ಬರಲೇ ಇಲ್ಲ. ಕೆಲ ಅಧಿಕಾರಿಗಳು ನಿವೃತ್ತರಾದರು; ಕೆಲವರು ಸತ್ತರು; ಕೆಲವರು ರಾಜೀನಾಮೆ ಕೊಟ್ಟರು. ಒಟ್ಟಿನಲ್ಲಿ ಪಾಪಯ್ಯನ ಪ್ರೀತಿಯ ಅಧಿಕಾರಿಗಳು ಕಡಿಮೆಯಾಗುತ್ತ ಬಂದರು. ಸರ್ಕಾರದ ಅಧಿಕಾರಿಗಳ ಪರಿಚಯ ದಿನಕ್ರಮೇಣ ಕಡಿಮೆಯಾಗುತ್ತಾ ಬಂತು.

ಈ ಮಧ್ಯೆ ಪಾಪಯ್ಯನ ಅಳಿಯನಿಗೆ ಅಧಿಕಾರದಲ್ಲಿದ್ದ ವ್ಯಾಮೋಹ ಮಾಯವಾಗಿ, ದೇಶಸೇವೆಯಲ್ಲಿ ರೂಪುಗೊಂಡಿತು. ವಕೀಲಿ ಕೆಲಸಕ್ಕೆ ಮತ್ತೆ ಕೈ ಹಾಕಿದ. ಗ್ರಾಮಾಂತರದವರೆಲ್ಲಾ ಬೆಂಬಲವಿತ್ತರು.

ಸ್ವಲ್ಪ ದಿನಗಳು ಉರುಳಿದುವು. ಪಾಪಯ್ಯನಿಗೆ ಇದ್ದಕ್ಕಿದ್ದ ಹಾಗೆ ಖಾಯಿಲೆ ಬರಬೇಕೆ? ಡಾಕ್ಟರುಗಳಿಗೆ ಸುಮಾರು ಐನೂರು ರೂಪಾಯಿ ತನಕ ಸೇರಿತು. ವ್ಯವಸಾಯವು ಹಿಂದಾಯಿತು. ಗಂಡು ಮಕ್ಕಳಿಲ್ಲದೆ ಪೇಚಾಟಕ್ಕೆ ಸಿಕ್ಕಿಕೊಂಡ. ವೆಚ್ಚಕ್ಕೆ ತಕ್ಕಂತೆ ವರಮಾನ ಇಲ್ಲವಾಯಿತು. ಸೊಸೈಟಿಯಲ್ಲಿ ಸಾಲ ಮಾಡಿದುದನ್ನು ತೀರಿಸಲು ಸಾಧ್ಯವಾಗಲಿಲ್ಲ. ಬೇಸಾಯವಿಲ್ಲದೆ ಸ್ವಲ್ಪ ಜಮೀನು ಬಂಜರಾಯಿತು. ಕೂಲಿಯವರು ದೊರೆಯುವುದೇ ಕಷ್ಟವಾಯಿತು. ಇದ್ದಬದ್ದ ರಾಗಿ ಭತ್ತವನ್ನು ಸರ್ಕಾರದವರು ವಶಪಡಿಸಿಕೊಂಡು ಎಷ್ಟು ಬೇಕೋ ಅಷ್ಟನ್ನು ಮಾತ್ರ ಬಿಟ್ಟರು.

ಹೀಗೆ ಪಾಪಯ್ಯ ಕಷ್ಟಕ್ಕೆ ಸಿಕ್ಕಿಕೊಂಡ. ಇಂತಹ ಸಮಯದಲ್ಲಿ ಮತ್ತೊಬ್ಬ ಮಗಳ ಲಗ್ನಕ್ಕಾಗಿ ಏರ್ಪಾಟು ನಡೆಯಿತು. ಒಂದು ಗೊತ್ತಾದ ದಿನ ಎಲ್ಲರೂ ಕೈಸಾಲೆಯಲ್ಲಿ ಕುಳಿತರು. ಗಂಡಿನ ಕಡೆಯವರೂ ಹೆಣ್ಣಿನ ಕಡೆಯವರೂ ಸೇರಿದರು. ಪುರೋಹಿತರು ಲಗ್ನಪತ್ರಿಕೆಯನ್ನು ಬರೆಯಲು ತೊಡಗಿದ್ದರು. ಪಾಪಯ್ಯ ಶಾಲು ಹೊದೆದುಕೊಂಡು ಯೋಚಿಸುತ್ತಾ ಕುಳಿತ. ಅಷ್ಟುಹೊತ್ತಿಗೆ ಸರಿಯಾಗಿ ಪೋಸ್ಟಿನವನು ಬಂದು "ಕಾಗದ ಬಂದಿದೆ ಸ್ವಾಮಿ" ಎಂದ. ಹುಡುಗನೊಬ್ಬ ಓಡಿಹೋಗಿ ಕಾಗದ ತಂದ. ಒಡೆದು ನೋಡಿದರು. ಏನೂ ಅರ್ಥವಾಗಲಿಲ್ಲ. ಪುರೋಹಿತರು ಆ ಕಾಗದವನ್ನು ತೆಗೆದುಕೊಂಡು ಓದಿದರು. ಅದರಲ್ಲಿ: "ಪಾಪಯ್ಯನವರಿಗೆ, ನೀವು ಸೊಸೈಟಿ ಬಾಬ್ತು ನಾಲ್ಕುಸಾವಿರ ರೂಪಾಯಿಗಳನ್ನು ಕೊಡದೆ ಬಾಕಿ ಇಟ್ಟುಕೊಂಡಿರುವುದರಿಂದ, ನಿಮ್ಮ ಆಸ್ತಿಪಾಸ್ತಿಗಳನ್ನು ತನಿಖೆ

ನಡೆಸಿ ಮನೆಯ ಸಾಮಾನುಗಳನ್ನು ಹರಾಜು ಹಾಕಲಾಗುತ್ತೆ. ಕೂಡಲೇ ಹಣ ಪಾವತಿಮಾಡಿ, ರಸೀದಿ ಪಡೆಯತಕ್ಕದೆಂದು ತಿಳಿಯುವುದು" ಎಂದು ಬರೆದಿತ್ತು. ಆಗ ಗಂಡಿನ ಕಡೆಯವರು ಈ ಸುದ್ದಿ ಕೇಳುತ್ತಲೇ ಯಾವುದೋ ಒಂದು ಕುಂಟು ನೆಪವನ್ನು ತೆಗೆದು ಲಗ್ನಪತ್ರಿಕೆ ನಿಲ್ಲಿಸಿ ಬಿಟ್ಟರು. ಪುರೋಹಿತನಿಗೆ ಬರುತ್ತಿದ್ದ ಎಂಟಾಣೆ ದಕ್ಷಿಣೆಗೂ ಕಲ್ಲುಬಿತ್ತು. ಆಗ ಪಾಪಯ್ಯ "ನನಗೂ ಓದೋಕೆ ಬಂದಿದ್ದರೆ?" ಎಂದು ಗೋಳಾಡಿದ.



# ರೋಗದ ರುಮಾಲಯ್ಯ

——::——

ರುಮಾಲಯ್ಯ ಅಂದರೆ ನಗಬೇಡಿ: ಅದು ಆತನ ಹೆಸರು. ಅವನ ಎದುರಿನಲ್ಲಿ ಯಾರಾದರೂ ನಕ್ಕರೆ ಶಿಕ್ಷೆ ಖಂಡಿತ. ಅವನ ಹೆಸರಿಗೆ ತಕ್ಕಂತೆ ಅವನ ರುಮಾಲೂ ಭಾರಿಯೇ; ಜರತಾರಿಯ ಭರ್ಜರಿ ಪೇಟ; ಆದರೆ ಅವನಿಗೊಂದೇ ಕೊರತೆ, ಯಾವಾಗಲೂ ರೋಗ, ಬೇಡವೆಂದರೂ ಬಿಡದು. ಹರಕೆ ಹೊತ್ತ, ಕಾಣಿಕೆ ತೆತ್ತ. ಆದರೇನು?

"ರುದ್ರದೇವರಿಗೆ ಹರಸಿಕೊಂಡು ಕಾಯೊಡೆದ. ಮರುದಿನವೇ ಮಲೇರಿಯಾ. ಇದೆಂಥಾ ದೇವರೋ ನಾಕಾಣೆ" ಎಂದು ಮುನಿಸಾಮಿ ನನ್ನ ಸಂಗಡ ಹೇಳಿದ. ನನಗೂ ಆಶ್ಚರ್ಯವೇ ಆಯಿತು. ರುದ್ರ ದೇವರು - ಬಹುಶಃ ಕೋಪಿಸಿಕೊಂಡು ಹಾಗೆ ಮಾಡಿದರೋ ಏನೋ? ನಾನೂ ಸಹ ಸ್ವಲ್ಪ ಯೋಚನೆ ಮಾಡಿ "ರುದ್ರ, ನರಸಿಂಹ ಇವೆಲ್ಲಾ ಬೇಡ. ವೆಂಕಟರಮಣ, ವಲ್ಲಭರಾಯ, ಚೆನ್ನಕೇಶವ ಮೊದಲಾದ ದೇವರಿಗಾದರೂ ಹರಿಸಿಕೊಂಡರೆ ವಾಸಿಯಾಗಬಹುದು" ಎಂದು ಮುನಿಸಾಮಿ ಸಂಗಡ ಹೇಳಿದೆ.

o o o o

ಸೋಮವಾರ ರಾತ್ರೆ ಚನ್ನಕೇಶವನಿಗೆ ಆರತಿ, ತೀರ್ಥಾಭಿಷೇಕ. ಊರಿನ ಬ್ರಾಹ್ಮಣರೆಲ್ಲಾ ಸೇರಿ ಸಹಸ್ರನಾಮ ಹೇಳುತ್ತಿದ್ದಾರೆ. ನಾನೂ ದೇವಸ್ಥಾನಕ್ಕೆ ಹೋದೆ. ರುಮಾಲಯ್ಯ ಒಂದು ಮೂಲೆಯಲ್ಲಿ ಕಂಬಳಿ ಹೊದ್ದುಕೊಂಡು ಮೂದಲಿಸುತ್ತಾ ಕುಳಿತಿದ್ದ. ನಾನು ಆತನನ್ನು ಕಂಡು "ನಮಸ್ಕಾರ ರುಮಾಲಯ್ಯನವರೇ, ಈಗ ಹೇಗಿದೆ?" ಎಂದು ಕೇಳಿದೆ. ಆತನು "ನಮಸ್ಕಾರ ಸ್ವಾಮಿ. ನೀವು ಹೇಳಿದ್ದಿರಂತಲ್ಲಾ. ಚನ್ನ ಕೇಶವನಿಗೆ ಅಭಿಷೇಕ ಮಾಡಿಸು ಅಂತ. ಅದಕ್ಕೋಸ್ಕರವೇ ಇಗೋ ಮಾಡಿಸ್ತಾ ಕುಂತಿದ್ದೀನಿ. ನಿಮ್ಮ ದಯೆಯಿಂದ ಈ ಹಾಳು ಜ್ವರ ನಿಂತು

ಬಿಟ್ಟರೆ . . ." ಎಂದು ಹೇಳಿಕೊಂಡ. ನಾನು ಸ್ವಲ್ಪ ಸಮಾಧಾನ ಹೇಳಿ, ಆಸ್ಪತ್ರೆ ಸುದ್ದಿ ಎತ್ತಿದೆ. ಅಷ್ಟರಲ್ಲಿ 'ಮಹಾಮಂಗಳಾರತಿ' ಎಂದರು ಎಲ್ಲರೂ ಎದ್ದು ನಿಲ್ಲಬೇಕಾಯಿತು. ಸರಿ. ನಾನೂ ಆ ಮಾತು ಅಲ್ಲಿಗೇ ಬಿಟ್ಟು ದೇವರ ಎದುರಿಗೆ ನಿಂತೆ. ನಮಸ್ಕಾರ ಹಾಕಿದೆ.

೦ ೦ ೦ ೦

ಸುಮಾರು ಎರಡು ಮೂರು ದಿನಗಳ ಬಳಿಕ ಮುನಿಸಾಮಿ ಕೆರೆ ಕಟ್ಟೆಯಮೇಲೆ ಸಿಕ್ಕಿದ. ನಾನು ಅವನಿಗೆ ದೇವಸ್ಥಾನದ ವಿಷಯವನ್ನೆಲ್ಲಾ ಹೇಳಿದೆ. ಕಡೆಗೆ "ಅಯ್ಯಾ ಮುನಿಸಾಮಿ, ರುಮಾಲಯ್ಯನಿಗೆ ಆಸ್ಪತ್ರೆ ವಿಷಯ ಸ್ವಲ್ಪ ಹೇಳು. ಡಾಕ್ಟರ ಹತ್ತಿರ ಹೋಗಿ ಔಷಧ ತೆಗೆದುಕೊಂಡರೆ ಇನ್ನೂ ಬೇಗ ಗುಣವಾಗುತ್ತೆ ಅಂತ. ನೋಡು ಮುನಿಸಾಮಿ, ದೇವರು ಏನು ಮಾಡುತ್ತಾನೆ. ಪಾಪ! ನಮ್ಮ ಕೈಲಾದ್ದು ನಾವು ಮಾಡಬೇಕು. ಆಮೇಲೆ ದೇವರ ಇಚ್ಛೆ, ರುಮಾಲಯ್ಯ ಬಹು ಒಳ್ಳೆ ಮನುಷ್ಯ. ಹತ್ತೂ ಜನರಿಗೆ ಬೇಕಾದವ, ಉಪಕಾರಿ, ಮುಖ್ಯವಾಗಿ ಯಾರಿಗೂ ಕೆಡಕು ಮಾಡು ಪವನಲ್ಲ. ಆದರೆ ಅವನಿಗೆ ಸದಾ ರೋಗವ ಕಾಟ. ಪಾಪ! ಅವನಿಗೆ ಆಸ್ಪತ್ರೆಯ ಮೂಲಕವೇ ಪರಿಹಾರ" ಎಂಬುದಾಗಿ ವಿವರಿಸಿದೆ. ಮುನಿ ಸ್ವಾಮಿ "ಆಗಲಿ ಸ್ವಾಮಿ ಖಂಡಿತಾ ಹೇಳ್ತೀನಿ" ಎಂದ. ನಾನು ಒಳ್ಳೇದಪ್ಪಾ ಹೋಗಿ ಬಾ" ಎಂದು ಹೇಳಿ, ಮುಂದೆ ಹೊರಟೆ.

೦ ೦ ೦ ೦

ಅಂದು ಊರಿನಲ್ಲೆಲ್ಲಾ ಗಡಿಬಿಡಿ. ರಥೋತ್ಸವದ ಸಂಭ್ರಮ, ಎಲ್ಲರೂ ಕೆಲಸ ಮಾಡುವವರೇ, ಕೆಲವರು ಬ್ರಾಹ್ಮಣ ಸಂತರ್ಪಣೆ ಕೆಲಸ ದಲ್ಲಿ, ಇನ್ನು ಕೆಲವರು ಪಾನಕಪೂಜೆ ಸಂಭ್ರಮದಲ್ಲಿ, ಇನ್ನೂ ಕೆಲವರು ಒಕ್ಕಲಿಗರ ಊಟದೇರ್ಪಾಟಿನಲ್ಲಿ, ಮತ್ತೆ ಕೆಲವರು ಪಲ್ಲಕ್ಕಿ ಸಿದ್ಧತೆಯಲ್ಲಿ, ಹೀಗೆಯೇ ಇನ್ನೂ ಎಷ್ಟೋ ಮಂದಿ. ಇಷ್ಟೆಲ್ಲಾ ಆದರೂ ರುಮಾಲಯ್ಯ ಪತ್ತೆಯೇ ಇಲ್ಲ. ವಿಚಾರಿಸಿದ್ದರಲ್ಲಿ ಅವನಿಗೆ ಜ್ವರ ನಿಂತು ಹೋಗಿ, ರಕ್ತ ಕುರು ಪ್ರಬಲವಾಗಿದೆಯೆಂದೂ ಹುಣ್ಣುಗಳು ಬಹು ನೋವನ್ನುಂಟು ಮಾಡುತ್ತಿದೆಯೆಂದೂ ಇಷ್ಟಾದರೂ ಯಾವ ಔಷಧವನ್ನೂ ಉಪಯೋ. ಗಿಸದೆ ಇದ್ದಾನೆಂದೂ ತಿಳಿದುಬಂದಿತು. ಅಂದಿನ ಉತ್ಸವ ಅವನದೇ.

ಉತ್ಸವಕ್ಕೆ ಬೇಕಾದ ಸಾಮಗ್ರಿಗಳೆಲ್ಲವನ್ನೂ ಒದಗಿಸಿದ್ದ. ಆತನ ಮಗ ಬಹು ಚುರುಕು. ಅಂಗಡಿಯಿಂದ ಪ್ರತಿಯೊಂದು ಸಾಮಾನೂ ತಂದುಕೊಟ್ಟಿದ್ದ. ಇಷ್ಟೇ ಅಲ್ಲದೆ ಬಡ ಬಡಗ್ಗರಿಗೆ ಅನ್ನ ಹಾಕಿಸಲು ತಕ್ಕ ವ್ಯವಸ್ಥೆ ಮಾಡಿದ್ದ. ಗದ್ದೆಯಲ್ಲಿ ಬೇಕಾದ ಹಾಗೆ ಬತ್ತ ಬರುತ್ತಿತ್ತು. ಆದ್ದರಿಂದ ಅಕ್ಕಿಗೇನೂ ಕೊರತೆ ಇದ್ದಿರಲಿಲ್ಲ. ಬಡ ಬಗ್ಗರಿಗೆ ಅನ್ನದಾನ ಒಂದು ಕಡೆ. ದೇವರ ಉತ್ಸವ ಒಂದು ಕಡೆ. ಇಷ್ಟಾದರೂ ದೇವರಿಗೆ ದಯೆ ಬೇಡವೆ? ದೇವರು ಸಹಾಯ ಮಾಡುತ್ತಾನೆ. ಆದರೆ ಬಹು ನಿಧಾನ.

ರುಮಾಲಯ್ಯನ ಮನೆಗೆ ಮುನಿಸಾಮಿ ಹೋಗಿ ಆಸ್ಪತ್ರೆ ವಿಷಯ ಹೇಳಿರಬಹುದು ಎಂದು ತೋರುತ್ತದೆ. ಆದುದರಿಂದಲೇ ರುಮಾಲಯ್ಯನ ಮಗ ಡಾಕ್ಟರ್ ಸಂಗಡ ಮಾತನಾಡುತ್ತಿದ್ದ. ಡಾಕ್ಟರು "ನಾಳೆ ಬಾ ಬಹಳ ಒಳ್ಳೇ ಔಷಧ ಕೊಡುತ್ತೇನೆ" ಅನ್ನುತ್ತಿದ್ದರು. ರುಮಾಲಯ್ಯನ ಮಗ "ಆಗಲಿ, ನಾಳೆ ಖಂಡಿತವಾಗಿಯೂ ಬರ್ತೇನೆ. ಆದರೆ ನೀವು ನಮ್ಮ ಮನೇ ಕಡೆ ಬರಬೇಕು. ನಮ್ಮ ತಂದೆಯವರಿಗೆ ನೀವು ಸ್ವಲ್ಪ ಹೇಳಬೇಕು" ಎಂದು ಹೇಳುತ್ತಿದ್ದ. ಅಷ್ಟರಲ್ಲಿ ನಾನೂ ಹೊಲದ ಕಡೆ ಯಿಂದ ಬರುತ್ತಾ ಇದ್ದವನು ಹತ್ತಿರಕ್ಕೆ ಹೋದೆ. ಡಾಕ್ಟರ್ ಬಹು ಸಂತೋಷದಿಂದ ನನ್ನನ್ನು ಮಾತನಾಡಿಸಿದರು. ನಾನು "ಏನು ಈ ದಿನ ಇಷ್ಟು ಖುಷಿಯಾಗಿದ್ದೀರಲ್ಲಾ?" ಎಂದು ಕೇಳಿದೆ. ಅವರು "ಏನೂ ಇಲ್ಲ ನಮ್ಮ ರುಮಾಲಯ್ಯ ನನಗೆ ಹೇಳಿಕಳುಹಿಸಿದ್ದಾನೆ. ಅದೂ ಒಂದು ಆಶ್ಚರ್ಯವಲ್ಲವೆ? ಅದಕ್ಕೇ ನನಗೆ ಇಷ್ಟು ಸಂತೋಷ" ಎಂದರು. ನಾನು "ಹಾಗಾದರೆ ಮೊದಲು ಹೋಗಿ ಬನ್ನಿ" ಎಂದು ಹೇಳಿ, ನನ್ನ ಮನೆಗೆ ಬಂದುಬಿಟ್ಟೆ.

ರುಮಾಲಯ್ಯನ ಮನೆಯಲ್ಲಿ ಡಾಕ್ಟರಿಗೂ ಆತನ ಮನೆಯವರಿಗೂ ದೊಡ್ಡ ಸಂಭಾಷಣೆ ನಡೆಯಿತು. "ಈಗ ಒಂದೆರಡು ಮಾತುಗಳನ್ನು ಮಾತ್ರ ಹೇಳುತ್ತೇನೆ ಕೇಳಿ" ಎಂದು ಡಾಕ್ಟರ ಹಿಂದೆ ಹೋಗಿದ್ದ ಕಾಂಪೌಂಡರ್ ನನ್ನ ಸಂಗಡ ಹೇಳಿದರು.

"ಏನು ಡಾಕ್ಟರೇ, ನೀವು ಕೊಡೋದೆಲ್ಲಾ ಬರೀ ಬಣ್ಣದ ನೀರಲ್ಲವೆ?" ಎಂದಳು ರುಮಾಲಯ್ಯನ ಹೆಂಡತಿ.

ಬಣ್ಣದ ನೀರು ಅಂದರೇನು? ಡಾಕ್ಟರರ ಪ್ರಶ್ನೆ.

ನೀರಿಗೆ ಬಣ್ಣ ಬೆರಸಿದ್ದೂ ಅಂತ.

ಕುಡಿಯೋ ನೀರಿಗೆ ಬಣ್ಣ ಬೆರಸಿ ಕೊಟ್ಟು ಬಿಡುತ್ತೇನೆಯೋ ನಾನು?

ಮತ್ತೇನು?

ಹಾಗಾದರೆ ಪ್ರತಿಯೊಂದು ಔಷಧವೂ ಬಣ್ಣದ ನೀರೇ ಅನ್ನಿ.

ಹೌದು.

"ಛೆ, ಛೆ, ಹಾಗಲ್ಲ. ಕೆಲವು ವೇಳೆ ಕೆಂಪು, ಕೆಲವು ಬಿಳುಪು ಹೀಗೆಲ್ಲಾ ಇರುತ್ತದೆ. ಅದು ಔಷಧದ ಸ್ವಾಭಾವಿಕ ಗುಣವೇ ಹೊರತು, ನಾವು ಬೆರಸಿದ ಬಣ್ಣವಲ್ಲ ತಿಳಿಯಿತೇ?"

ಕಡೆಗೆ ರುಮಾಲಯ್ಯನ ಮನೆ ಹೆಂಗಸರನ್ನು ಸಮಾಧಾನಮಾಡಿ, ಔಷಧವನ್ನು ತೆಗೆದುಕೊಳ್ಳುವಂತೆ ಮಾಡಿದ್ದಾಯಿತು. ಈಗ ಪ್ರತಿನಿತ್ಯವೂ ನಾನೇ ಔಷಧವನ್ನು ಕಳುಹಿಸುತ್ತಾ ಇದ್ದೇನೆ. ಇಷ್ಟು ಮಾತುಕತೆಗಳು ನಡೆಯುವ ಹೊತ್ತಿಗೆ ಆಸ್ಪತ್ರೆ ಬಾಗಿಲು ತೆಗೆಯುವ ಹೊತ್ತಾಯ್ತು. ಕಾಂಪೌಂಡರು ಆಸ್ಪತ್ರೆಗೂ, ನಾನು ಪಕ್ಕದ ಹಳ್ಳಿಗೂ ಹೊರಟೆವು.

೦ ೦ ೦ ೦

ಈಗ ರುಮಾಲಯ್ಯನವರ ಜ್ವರ ಪೂರ್ತಾ ನಿಂತಿದೆ. ರಕ್ತಕುರುಗಳೆಲ್ಲಾ ಮಾಯವಾಗಿವೆ. ಎದ್ದು ಓಡಾಡುತ್ತಾನೆ. ಹರಕೆ ತೀರಿಸಲು ತಿರುಪತಿಗೆ ಇಷ್ಟರಲ್ಲೇ ಹೊರಡುತ್ತಾನೆ. ಊರ ಮುಂದಲ ಮಾರಿಗೆ ಒಂದು ಕುರಿಯನ್ನೂ ಬಲಿಕೊಡಲು ತರಿಸಿದ್ದಾನೆ. ಡಾಕ್ಟರಿಗೆ ಒಂದು ತಟ್ಟೇ ತುಂಬ ಹೂವು ಹಣ್ಣು ಕಳುಹಿಸಿಬೇಕೆಂದು ಪ್ರಯತ್ನ ನಡೆಯುತ್ತಿದೆಯಂತೆ.

ರುಮಾಲಯ್ಯನವರ ತಿರುಪತಿ ಯಾತ್ರೆ ಮುಗಿಯುತ್ತಾ ಬಂತು. ಮಾಲೂರು ಸ್ಟೇಷನ್ ಬರುವ ಹೊತ್ತಿಗೆ ರುಮಾಲಯ್ಯನವರು "ಏಕೋ ವಾಂತಿಗೆ ಬರುವ ಹಾಗಿದೆ" ಎಂದು ಹೇಳುತ್ತಿರುವಾಗ್ಗೆ ಒಂದೆರಡು ಸಲ ವಾಂತಿಯಾಗಿಯೇ ಹೋಯಿತು. ರೈಲಿನಲ್ಲಿ ಕುಳಿತಿದ್ದವರೆಲ್ಲರೂ ಅಸಹ್ಯ ಪಟ್ಟುಕೊಂಡರು. ಕೆಲವರು "ಇಂತಹ ರೋಗಿಷ್ಟರ ಸಹವಾಸ ಎಂದಿಗೂ ಬೇಡಪ್ಪಾ" ಅಂದುಕೊಂಡರು. ಮಾಲೂರಿನಿಂದ ವೈಟ್‌ಫೀಲ್ಡ್ ರೈಲ್ವೆ

ಸ್ಟೇಷನ್ನಿಗೆ ಬರುವಷ್ಟರಲ್ಲಿ ನಾಲ್ಕಾರು ಸಲ ವಾಂತಿ ಆಗಿ ರುಮಾಲಯ್ಯನವರಿಗೆ ಬಹು ಆಯಾಸವಾಯಿತು.

ಊರು ಸೇರುವಾಗ್ಗೆ ರಾತ್ರೆ ಬಹಳ ಕತ್ತಲು. ರೈಲಿಳಿದ ಕೂಡಲೇ ಎತ್ತಿನ ಗಾಡಿ ಪ್ರಯಾಣ. ಗಾಡಿಯಲ್ಲೇ ಸ್ವಲ್ಪ ಜ್ವರ ಬಂದ ಹಾಗಾಯ್ತು. ಮನೆ ಸೇರಿದ ಕೂಡಲೇ ಪುನಃ ರುಮಾಲಯ್ಯನವರು ಮಲಗಿಬಿಟ್ಟರು. ಬೆಳಗಾಗುವ ವೇಳೆಗೆ ವಾಂತಿ, ಜೊತೆಗೆ ಭೇದಿಯೂ ಆರಂಭವಾಯಿತು. (ತಿರುಪತಿ ಮಹಾತ್ಮೆ) ಡಾಕ್ಟರಿಗೆ ಹೇಳಿ ಕಳುಹಿಸಿದರು. ಅವರು ಸ್ವಲ್ಪ ಹಿಂದು ಮುಂದು ನೋಡಿ "ರುಮಾಲಯ್ಯನವರು ತಾವಾಗಿಯೇ ಹೇಳಿ ಕಳುಹಿಸಿರುವಾಗ ಹೋಗದೆ ಇರಬಾರದು" ಎಂದುಕೊಂಡು ಅವರೂ ಬಂದರು. ಕೈ ಹಿಡಿದು ನೋಡಿದರು. ಜ್ವರ ಸಾಧಾರಣವಾಗಿತ್ತು. 'ವಾಂತಿ ಭೇದಿ' ಎಂದು ಕೇಳಿದ ಕೂಡಲೇ ಡಾಕ್ಟರು "ಕಾಲರಾ ಇನಾಕ್ಯುಲೇಷ ಮಾಡಿಸಿಕೊಳ್ಳಿ" ಎಂದರು. ರುಮಾಲಯ್ಯ "ಹಾಗೆಂದರೇನು?" ಎಂದ. ಅದಕ್ಕೆ ಡಾಕ್ಟರು "ಅದು ನಿಮಗೇನೂ ತೊಂದರೆ ಮಾಡುವುದಿಲ್ಲ. ಇನ್ನು ಸ್ವಲ್ಪ ಹೊತ್ತಿಗೆ ತಂದು ತೋರಿಸುತ್ತೇನೆ" ಎಂದು ಹೇಳುತ್ತಾ ಹೊರಕ್ಕೆ ಬಂದು ಬಿಟ್ಟರು.

ಡಾಕ್ಟರು ಹೊರಕ್ಕೆ ಹೋಗುತ್ತಲೇ ಮನೆಯವರೆಲ್ಲಾ ಕುಳಿತು ಆಲೋಚಿಸತೊಡಗಿದರು. "ಡಾಕ್ಟರು ಏನು ಮಾಡಿಬಿಡುತ್ತಾರೆಯೋ? ಎಲ್ಲಿ ಪ್ರಾಣ ಹೋಗಿಬಿಡುತ್ತದೆಯೋ? ಏನು ಗತಿ? ಎಂದು ಮೊದಲಾಗಿ ಮಾತುಗಳು ಕೇಳಬಂದುವು.

ಡಾಕ್ಟರೂ ಬಂದರು. ಒಂದು ಸಣ್ಣ ಗಾಜಿನ ಕೊಳವೆಯನ್ನು ಕೈಯ್ಯಲ್ಲಿ ತಂದರು. ಆದಕ್ಕೆ ತಕ್ಕ ಸಿದ್ಧತೆ ಮಾಡಿಕೊಂಡು ರುಮಾಲಯ್ಯನ ಎಡಗೈ ರಟ್ಟೆಯನ್ನು ಸೆಳೆದು ಔಷಧ ಹಚ್ಚಿ, ಇನಾಕ್ಯುಲೇಷ ಮಾಡಿಯೇ ಬಿಟ್ಟರು. ಸೂಜಿಯನ್ನು ನೋಡಿದ ಕೂಡಲೇ ರುಮಾಲಯ್ಯ 'ಅಬ್ಬಬ್ಬಾ' ಎಂದ. ಹೆಂಗಸರಂತು ಆ ಗಾಜಿನ ಕೊಳವೆ; ಅದರ ಮೊನಚಾದ ಮೂತಿ; ಸೂಜಿ; ಇವುಗಳನ್ನು ಕಂಡು ಭಯದಿಂದ ನಡುಗಿಹೋದರು. ಡಾಕ್ಟರು ನಗುತ್ತಾ ಸಮಾಧಾನ ಹೇಳಿ 'ನಮಸ್ಕಾರ' ಎನ್ನುತ್ತಾ ಹೊರಟು ಬಂದರು.

ಅಂದು ಸೊಗಸಾದ ನಾಟಕ. 'ಸುಭದ್ರಾ ಪರಿಣಯ'. ನಾಟಕದ ನಾಯಕರು ರುಮಾಲಯ್ಯನವರಿಗೂ ಒಂದು 'ಆಹ್ವಾನ ಪತ್ರಿಕೆ ಕಳುಹಿಸಿದ್ದರು. ರುಮಾಲಯ್ಯನವರಿಗೆ ಸುಭದ್ರೆ ಅರ್ಜುನ ಎಂದರೆ ಬಹು ಪ್ರೀತಿ. ಭಾರತವನ್ನು ಓದುವಾಗಲೂ ಕೇಳುವಾಗಲೂ ನಾಟಕಗಳಲ್ಲಿ ನೋಡುವಾಗಲೂ ಬಹು ಆಸಕ್ತಿ. ಅಂದು ತಾವೂ ನಾಟಕಕ್ಕೆ ಹೋಗಬೇಕೆಂಬ ಹೆಬ್ಬಯಕೆ. ಆದರೆ ಹೋಗಲು ಸಾಧ್ಯವಿಲ್ಲ. 'ಕಾಲರಾ' ಆವರಿಸಿಬಿಟ್ಟಿದೆ.

ಸ್ವಲ್ಪ ಹೊತ್ತಾದರೂ, ನೋಡಬೇಕೆಂದು ಹಠ ಹಿಡಿಯಲಾಗಿ ಮನೆಯವರು ಸಾಹಸ ಮಾಡಿ ನಾಟಕಕ್ಕೆ ಕರೆದುಕೊಂಡು ಬಂದರು. ಅಲ್ಲಿಯೇ ರುಮಾಲಯ್ಯನವರಿಗೆ ವಾಂತಿ ಭೇದಿ ಆಗಿಹೋಯಿತು. ಅಲ್ಲಿದ್ದವರೆಲ್ಲಾ ಬೇಸರಿಸಿಕೊಂಡರು. ಆದರೇನು? ನಾಟಕದವರೇ ಬಂದು ಉಪಾಯವಾಗಿ ಹೊರಕ್ಕೆ ಕರೆದುಕೊಂಡು ಬಂದು ಮನೆಗೆ ಕಳುಹಿಸಿದರು. ರುಮಾಲಯ್ಯ "ಈ ಹಾಳು ರೋಗ ನನ್ನನ್ನೇ ಕಿತ್ತು ತಿನ್ನುತ್ತೆ" ಎಂದು ಗೊಣಗಾಡಿದ.

"ಊರೆಲ್ಲಾ ಕಾಲರಾ. ಎಲ್ಲರೂ ಇನಾಕ್ಯುಲೇಷನ್ ಮಾಡಿಸಿಕೊಳ್ಳಬೇಕು" ಎಂದು ತೋಟಿ ಊರೆಲ್ಲೆಲ್ಲಾ ಸಾರಿದ. ರುಮಾಲಯ್ಯನ ದೆಸೆಯಿಂದ ಊರೆಲ್ಲಾ ಹಾಳು ಎಂದು ಕೆಲವರು ಪಿಸುಗುಟ್ಟಿದರು. ರುಮಾಲಯ್ಯನ ಮನೆಯೋ? ದನಗಳ ದೊಡ್ಡಿಯಾದರೂ ಮೇಲು ಎಂದು ಹೆಂಗಸರು ಆಡಿಕೊಂಡರು. "ಗಾಳಿ ಇಲ್ಲ ಬೆಳಕಿಲ್ಲ. ಕತ್ತಲೆ ಕೋಣೆ" ಎಂದರು ಡಾಕ್ಟರು.

ರುಮಾಲಯ್ಯ ಎಲ್ಲಾ ದೇವರಿಗೂ ಹರಸಿಕೊಂಡ. ಮಂತ್ರ ಹಾಕಿಸಿಕೊಂಡ. ತಂತ್ರ ಮಾಡಿದ. ಏನಾದರೂ ಗುಣವೇ ಇಲ್ಲ. ಡಾಕ್ಟರು "ಬೆಂಗಳೂರಿಗಾದರೂ ಹೋಗಿ ಔಷಧ ತೆಗೆದುಕೊಳ್ಳಿ" ಎಂದರು. ಅದಕ್ಕೂ ಒಪ್ಪಲಿಲ್ಲ. ಮನೆಮಕ್ಕಳ ಪಾಡು ಹೇಳತೀರದು. ಸುಮಾರು ಒಂದು ತಿಂಗಳ ಕಾಲ ಕೊರಗಾಡಿ, ಡಾಕ್ಟರ ಮಾತೂ ಕೇಳದೆ ಕತ್ತಿಗೊಂದು ಯಂತ್ರವನ್ನು ಕಟ್ಟಿಕೊಂಡು, "ಇದರಿಂದಲೇ ನನಗೆ ವಾಸಿಯಾಗಬೇಕು" ಎಂದು ಅನ್ನುತ್ತಾ ಒಂದು ದಿನ ಪರಂಧಾಮವನ್ನೈದೇ ಬಿಟ್ಟ.

"ಅಯ್ಯೋ! ರುಮಾಲಯ್ಯ, ಅನ್ಯಾಯವಾಗಿ ಸತ್ತುಹೋದೆಯಾ?" ಎಂದು ಊರಿನವರೆಲ್ಲರೂ ದುಃಖಪಟ್ಟರು.

o o o o

ಮುನಿಸಾಮಿ ಓಡಿಬಂದು - "ಸ್ವಾಮಿ - ರಾಯರೇ ನೋಡಿದಿರಾ ರುಮಾಲಯ್ಯನ ಗತಿ! ಛೆ ಪಾಪ" ಎಂದು ಹೇಳಿದ. ನಾನು "ಅಯ್ಯಾ, ಮುನಿಸಾಮಿ, ದೇವರನ್ನು ನಂಬಿದರೆ ಅವನನ್ನೇ ನಂಬಬೇಕು. ಇಂಗ್ಲಿಷ್ ಔಷಧಿ ಹಿಡಿದರೆ ಅದನ್ನೇ ಬಿಡದೆ ಸೇವಿಸಬೇಕು. ಆಯುರ್ವೇದದ ಔಷಧವನ್ನೇ ಉಪಯೋಗಿಸುವುದಾದರೆ ಅದನ್ನೇ ಸೇವಿಸಬೇಕು. ಯಾವುದೂ ಇಲ್ಲದೆ ಅದು ಸ್ವಲ್ಪ ಇದು ಸ್ವಲ್ಪ ಮಾಡಬಾರದು" ಎಂದೆ. ಅವನು "ಮುಖ್ಯವಾಗಿ - ಅವನ ಹಣೆಯಲ್ಲಿ ಸಾಯಬೇಕೂ ಅಂತ ಬರೆದಿತ್ತು, ಸ್ವಾಮಿ, ಸತ್ತುಹೋದ. ದುರಾದೃಷ್ಟ ಸ್ವಾಮಿ - ದುರಾದೃಷ್ಟ. ತಪ್ಪು ಯಾರದೂ ಇಲ್ಲ" ಎಂದ.



# ತಿರುಪತಿ ತಿಮ್ಮಯ್ಯ

——::——

"ತಿಮ್ಮಯ್ಯಾ! ಏಕಪ್ಪ ಹೀಗಿದ್ದಿ: ಏನು ಸಮಾಚಾರ" ಎಂದೆ.

"ಏನ್ಹೇಳ್ಲಿ ಸ್ವಾಮಿ, ನಮ್ಮಂಥಾ ಕುರಿಗಳು ಇದ್ದರೇನು-ಸತ್ತರೇನು?" ಎಂದ.

"ಇದೇನು ಹೀಗೆ ಹೇಳುತ್ತಿ: ನನಗೆ ಬಹಳ ಆಶ್ಚರ್ಯವಾಗುತ್ತಿದೆ" ಎನ್ನುವಷ್ಟರಲ್ಲಿ ಉಪಾಧ್ಯಾಯರು ಸ್ಕೂಲ್ ಮುಗಿಸಿಕೊಂಡು ಅಲ್ಲಿಗೆ ಬಂದರು. ನಾನು ಉಪಾಧ್ಯಾಯರನ್ನು ಕುರಿತು "ತಿಮ್ಮಯ್ಯ ಏಕೆ ಹೀಗಿದ್ದಾನೆ?" ಎಂದು ಕೇಳಿದೆ. ಅವರು "ಬನ್ನಿ ನನ್ನ ಸಂಗಡ; ಅವನ ಕತೆ ಹೇಳುತ್ತೇನೆ. ತಿಮ್ಮಯ್ಯನ ಸಮಾಚಾರ ಪೇಪರ್ನ್ಗಾದರೂ ಕೊಟ್ಟರೆ ದೇಶವೆಲ್ಲ ಓದಿ ನೀತಿ ಕಲಿಯಬಹುದು. ಹಾಗಿದೆ ಅವನ ಕತೆ" ಎಂದರು.

ನನಗೆ ಕುತೂಹಲ ಹೆಚ್ಚಿತು. ಉಪಾಧ್ಯಾಯರನ್ನು "ಕತೆ ಹೇಳಿ. ಕೇಳೋಣ" ಎಂದೆ. ಅವರು "ಹಾಗಾದರೆ ಕೆರೆ ಏರಿ ಮೇಲೆ ಕುಳಿತು ಕೊಳ್ಳೋಣ. ಸಂಜೆಹೊತ್ತು ತಂಪಾಗಿರುತ್ತೆ. ನಾನು ಕತೆ ಹೇಳಿ, ಹಾಗೇ ಸಂಧ್ಯಾವಂದನೆಯನ್ನೂ ಮಾಡಿಕೊಂಡು ಬರುತ್ತೇನೆ. ನೀವೂ ನನ್ನೊಡನೆ ಸ್ವಲ್ಪ ಹೊತ್ತು ಇರಬಹುದಲ್ಲಾ. ಏನೋ ನಾವೆಲ್ಲ ಹಳೆಯ ಕಾಲದವರು. ದೇವರಪೂಜೆ, ಸಂಧ್ಯಾವಂದನೆ ಇವೆಲ್ಲಾ ಬಿಟ್ಟಿಲ್ಲ. ನೀವೆಲ್ಲಾ ಈಗಿನ ಕಾಲದವರು . . ." ಎನ್ನುವಷ್ಟರಲ್ಲಿ ನಾನು ಬಾಯಿ ಹಾಕಿ "ಅಲ್ರಿ ಮೇಷ್ಟ್ರೆ, ಕತೆ ಹೇಳಿ ಅಂದರೆ ಏನೇನೋ. ಪುರಾಣ ತೆಗೆದಿರಲ್ಲಾ" ಅಂದೆ. ಅವರು "ಓಹೋ ಮರತೇ ಹೋಯಿತು. ಕತೆ ಹೇಳ್ತೇನೆ." ಎನ್ನುತ್ತಾ ಕೆರೆಯ ಕಡೆಗೆ ಹೆಜ್ಜೆ ಹಾಕಿದರು. ಇಬ್ಬರೂ ಹೊರಟು, ಏರಿಯ ಮೇಲೆ ಬೆಳೆದಿದ್ದ ಹಸುರು ಹುಲ್ಲಿನ ಮೇಲೆ ಕುಳಿತೆವು. ತಿಮ್ಮಯ್ಯ ಕೆರೆಯ ವರೆಗೂ ಬಂದು, "ಬರ್ತೀನಿ ಬುದ್ದಿ: ನಮಸ್ಕಾರ ಬರ್ತ್ಯತೆ" ಎಂದು ಹೇಳಿ ತನ್ನ ಕೆಲಸಕ್ಕೆ ತಾನು ಹೊರಟು ಹೋದ.

ಉಪಾಧ್ಯಾಯರು ತಕ್ಕಮಟ್ಟಿಗೆ ಓದಿದವರು. ಹಾಸ್ಯಪ್ರಿಯರು. ಹುಡುಗರೆಲ್ಲಾ ಇವರನ್ನು ಬಹುವಾಗಿ ಪ್ರೀತಿಸುತ್ತಾರೆ. ಊರಿನ ಜನ ಇವರಲ್ಲಿ ಒಂದು ವಿಧವಾದ ಗೌರವವನ್ನಿಟ್ಟಿದ್ದಾರೆ. ಶಾಲೆಯಲ್ಲಿ ತಮ್ಮ ದರ್ಪ ಮತ್ತು ವಿಚಕ್ಷಣೆಯಿಂದ ಯಾರ ಗಲಭೆಗೂ ಅವಕಾಶ ಕೊಟ್ಟಿಲ್ಲ. ಊರಿನ ವ್ಯವಹಾರದಿಂದ ಇವರು ಸ್ವಲ್ಪ ದೂರವೇ. ಯಾರು ಕಿತ್ತಾಡಿ, ಜಗಳವಾಡಿದರೂ ಇವರು ತಲೆಗೆ ಹಚ್ಚಿಕೊಳ್ಳುತ್ತಿರಲಿಲ್ಲ. ಕಮಲದ ಮೇಲಣ ನೀರಿನಂತೆ ಇದ್ದಾರೆ. ಪಟಿಂಗರಾದ ಹುಡುಗರನ್ನು ಬಾಲ ಮುರಿದು ಕೂಡಿಸಿದ್ದಾರೆ. ಬುದ್ಧಿವಂತರಾದ ಹುಡುಗರಿಗೆ ಪ್ರೋತ್ಸಾಹ ಕೊಡುತ್ತಾರೆ. ಆದರೆ ಇವರಿಗೆ ಚೆನ್ನಾಗಿ ಕತೆ ಹೇಳಲು ಬರುವುದೋ ಇಲ್ಲವೋ ಗೊತ್ತಿಲ್ಲ: ಏಕೆಂದರೆ, ನಾನು ಅವರ ಬಾಯಿಂದ ಕತೆ ಕೇಳುವುದು ಇದೇ ಮೊದಲು. ಕತೆ ಆರಂಭವಾಯಿತು.

"ಆ ತಿಮ್ಮಯ್ಯ ಇದ್ದಾನಲ್ಲಾ, ಅವನು ನಮ್ಮ ರೈತ. ಅವನ ತಾತ ಬಹಳ ಗಟ್ಟಿಗ. ಬೇಕಾದಷ್ಟು ಜಮೀನು ಸಂಪಾದಿಸಿದ್ದ. ಆದರೆ ತಿಮ್ಮಯ್ಯನ ತಂದೆ ದುಷ್ಟರ ಸಹವಾಸದಿಂದ ಇದ್ದಬದ್ದ ಆಸ್ತಿಯನ್ನೆಲ್ಲಾ ಹಾಳುಮಾಡಿದ. ಹೆಂಡತಿ ಮೈಮೇಲಿದ್ದ ಅಡ್ಡಿಕೆ, ಕಾಸಿನಸರ, ಸೇವಂತಿಗೆ ಹೂವು - ಎಲ್ಲವನ್ನೂ ಹಾಳುಮಾಡಿದ. ಯಾವುದೋ ಒಂದು ವ್ಯಾಜ್ಯದಲ್ಲಿ ಸಿಕ್ಕಿಕೊಂಡು ಕೋರ್ಟಿಗೆ ತಿರುಗಿ, ಒಂದು ಹೊಲ ಮಾರಿ, ಕೇಸ್‌ನಲ್ಲಿ ಗೆದ್ದು, ಊರಿನ ಜನಕ್ಕೆ ಸೋತ. ಈಗಂತೂ ಗದ್ದೆ ಸ್ವಲ್ಪವೂ ಇಲ್ಲ. ಇರುವುದೊಂದೇ ಒಂದು ಮೂರು ಎಕರೆ ಹೊಲ. ಅವನ ಪಾಡು ಹೀಗಾದ ಮೇಲೆ, ಅವನ ಮಗ ತಿಮ್ಮಯ್ಯನ ಪಾಡು ಕೇಳಬೇಕೆ?

ಈಚೆಗೆ ತಿಮ್ಮಯ್ಯ ಮದುವೆಮಾಡಿಕೊಂಡ. ಮದುವೆಯಾದ ಮೂರನೇ ದಿನವೇ ಅವನ ತಂದೆಗೆ ಪ್ಲೇಗ್ ತಗಲಿ ಸತ್ತುಹೋದ.

ಆದ್ದರಿಂದ ತಿಮ್ಮಯ್ಯನ ತಾಯಿ ಮಗನ ಹತ್ತಿರವೇ ಇದ್ದಳು. ತನ್ನ ಗಂಡ ಮಾಡಿದ ಅಪರಾಧಗಳನ್ನು ಹೋಗಲಾಡಿಸುವುದಕ್ಕಾಗಿ ನೂರಾರು ದೇವರುಗಳನ್ನೂ ದೇವತೆಗಳನ್ನೂ ಹರಸಿಕೊಂಡಳು. ಆದರೆ ಅದರಿಂದ ಪ್ರಯೋಜನವಾಯಿತೋ ಇಲ್ಲವೋ ಹೇಳುವರಾರು? ಅತ ಸತ್ತು ಸ್ವರ್ಗದಲ್ಲಿದ್ದಾನೆಯೋ ನರಕದಲ್ಲಿದ್ದಾನೆಯೋ ಯಾರಿಗೆ ಗೊತ್ತು?

ಒಂದು ದಿನ ಅತ್ತೆಗೂ ಸೊಸೆಗೂ ಮನಸ್ತಾಪ ಬಂದಿತು. ಹೊತ್ತಿಗೆ ಸರಿಯಾಗಿ ಕೆಲಸಮಾಡದೇ ಇರುವುದು; ಹಸುವಿಗೆ ಹುಲ್ಲುಹಾಕದೆ ಅದನ್ನು ಸಂಕಟಪಡಿಸುವುದು; ಇವೇ ಮೊದಲಾದುವುಗಳು ಕಾರಣ. ಮತ್ತೊಂದು ದಿನ ಸೊಸೆ ತನ್ನ ಕೆಲವು ಒಡವೆಗಳನ್ನು ಅತ್ತೆಯ ಅನುಮತಿ ಇಲ್ಲದೆಯೇ ಅಕ್ಕಸಾಲೆಯ ಬಳಿಗೆ ಹೋಗಿ ಕರಗಿಸಿ, ಬಂಗಾರದ ಗಟ್ಟಿಮಾಡಿಸಿದಳಂತೆ. ಇನ್ನೂ ಒಂದುದಿನ ಕುರಿಮರಿಯೊಂದನ್ನು ತನ್ನ ಗಂಡನಿಗೂ ಅತ್ತೆಗೂ ತಿಳಿಯದ ಹಾಗೆ ಯಾರಿಗೋ ಮಾರಿಬಿಟ್ಟಳಂತೆ. ಹೀಗೆ ಅತ್ತೆಗೂ ಸೊಸೆಗೂ ಅಸಮಾಧಾನ ಹುಟ್ಟಿತು. ಅತ್ತೆ "ಇನ್ನು ಇಲ್ಲಿರುವುದು ಸರಿಯಲ್ಲ" ಎಂದುಕೊಂಡು ಮಗನಿಗೆ ಹೀಗೆಂದಳು; "ಅಪ್ಪ ಮಗೂ, ನಿಮ್ಮ ತಂದೆ ಬುದ್ಧಿ ಇಲ್ಲದೆ ಎಲ್ಲವನ್ನೂ ಹಾಳುಮಾಡಿಕೊಂಡರು. ಆದರೆ ನೀನೂ ಹಾಗೆ ಮಾಡಬೇಡ. ಹೆಂಡತಿಮಾತು ಕೇಳೋ ಗಂಡಬಲು ದಿನ ಬಾಳೋದಿಲ್ಲ. ಹೆಂಗಸು ಹೋದ ದಾರೀಗೆ ಬಿಟ್ಟರೆ ಗೊತ್ತಿಲ್ವೆ ಒಂದು ಹಿಡಿ ಮಣ್ಣು. ಹೆಂಗಸರು ಮಾಯಾ ಪ್ರಪಂಚ ಎನ್ನುವುದು ನಿನಗೆ ಇನ್ನೂ ತಿಳಿಯದು. ಒಲ್ದರೆ ನಾರಿಯಂತೆ-ಇಲ್ದೇ ಹೋದರೆ ಮಾರಿಯಂತೆ. ನೋಡು ಈಗಲೇ ಹೇಳಿದ್ದೇನೆ. ಈ ಸಂಸಾರದಲ್ಲಿ ಆಗೋ ಮಿಗ್ತೆ ಎಲ್ಲಾ ತವರುಮನೆ ಸೇರೋದೇ ಸೈ. ಆ ಬಂಗಾರದ ಗಟ್ಟಿ, ಅವಳ ಅಪ್ಪನ ಹತ್ತಿರ ಇರೋದು ನನಗೆ ತಿಳೀದೇನು, ಕುರಿಮರಿ ಮಾರಿದ ದುಡ್ಡು ಅವಳ ತಮ್ಮನ ಪೇಟಿ ಖರ್ಚಿಗಾಯಿತು ಬಿಡು. ಎಲ್ಲಾನಾ ಹೋಗ್ಲಿ-ಬಿಡು ನಮಗೇಕೆ" ಹೀಗೆ ಹೇಳಿ ಕಣ್ಣಲ್ಲಿ ಕಾಲುವೆ ಹರಿಸಿದಳು. ತಿಮ್ಮಯ್ಯನಿಗೆ ಅನೇಕ ವಿಷಯಗಳು ತಿಳಿದ ಹಾಗಾಯಿತು. ಕುರಿಮರಿ ಸತ್ತುಹೋಯಿತೆಂದು ತಿಮ್ಮಯ್ಯನಿಗೆ ಅವನ ಹೆಂಡತಿ ಹೇಳಿದ್ದಳಂತೆ. ಈಗ ತಿಮ್ಮಯ್ಯ ಹುಷಾರಾದ. ಅವನ ತಾಯಿ, "ನೋಡು, ನಾನೂ ಸಾಯೋ ಮುದುಕಿ, ಸಾಯೋಕ್ಮುಂಚೆ ಆ ತಿರುಪತಿ ವೆಂಕಟರಮಣ ಸ್ವಾಮಿನಾದರೂ ಕಣ್ಣಾರೆ ಕಂಡು ಸಂತೋಷಪಡೋಣ ಅನ್ನಿಸ್ತದೆ. ಅಷ್ಟು ಉಪಕಾರ ಮಾಡಪ್ಪ: ನಿಂಗೆ ಬಲು ಪುಣ್ಯ ಬರ್‍ತದೆ" ಎಂದು ಬೇಡಿಕೊಂಡಳು. ತಾಯಿಯ ಹಂಬಲನ್ನು ಏಕೆ ವಿಫಲಗೊಳಿಸಬೇಕೆಂದು ಯೋಚಿಸಿ, ತಿರುಪತಿಗೆ ಹೊರಡಲು ತಕ್ಕ ಏರ್ಪಾಡು ಮಾಡಿದ.

ಅಂದು ತಿಮ್ಮಯ್ಯ, ಅವನ ತಾಯಿ, ಇನ್ನೂ ಊರಿನ ಹಲಕೆಲವು

ರೈತಾಪಿ ಜನರು ಎಲ್ಲರೂ ಹೊರಟರು. ತಿಮ್ಮಯ್ಯನ ಹೆಂಡತಿ ತವರು ಮನೆಗೆ ಹೊರಟುಹೋದಳು.

ತಿರುಪತಿಯನ್ನು ಎಲ್ಲರೂ ತಲುಪಿದರು. ತಿಮ್ಮಯ್ಯ ಎರಡು ದಿನ ಮಾತ್ರ ಇದ್ದು, ಮನೆ ಕಡೆ ಯೋಚನೆ ಹತ್ತಿ, ಹಿಂದಕ್ಕೆ ಬಂದ. ತಿರುಪತಿಯಲ್ಲೇ ಅವನ ತಾಯಿ ಇವರ ಗ್ರಾಮಸ್ಥರೊಡನೆ ಇದ್ದಳು. ತಿಮ್ಮಯ್ಯ ಹಿಂದಕ್ಕೆ ಬಂದ ಸ್ವಲ್ಪ ದಿನಗಳಲ್ಲಿಯೇ ಒಂದು ಕಾಗದ ಬಂತು. ಅದರಲ್ಲಿ "ನಿನ್ನ ತಾಯಿಗೆ ಜ್ವರ ಬಂದುಬಿಟ್ಟಿದೆ. ಔಷಧ ಕೊಡಿಸುತ್ತಾ ಇದ್ದೇವೆ. ಸಾಧ್ಯವಾದರೆ ಹೊರಟುಬರುವುದು" ಎಂದು ಬರೆದಿತ್ತು. ತಿಮ್ಮಯ್ಯ ಆ ಕಾಗದ ಹಿಡಿದುಕೊಂಡು ದಿನವೆಲ್ಲಾ ಸುತ್ತಾಡಿ, ಯಾರು ಓದುಗರೂ ಸಿಕ್ಕದೆ ನನ್ನ ಹತ್ತಿರಕ್ಕೆ ಬಂದ. ನಾನು ಓದಿ ಅರ್ಥ ಹೇಳಿದೆ. ತಿಮ್ಮಯ್ಯ "ಸರಿ, ಜ್ವರ ಬಂದಿದೆಯೆ? ಈಗೇನ್ಮಾಡೋದು ಬುದ್ಧಿ" ಎಂದ.

ಇನ್ನೊಂದು ದಿನ ತಿರುಪತಿಯಿಂದ ತಂತೀ ಬಂತು. ತಿಮ್ಮಯ್ಯ ಗಾಬರಿ ಬಿದ್ದು ಒದ್ದಾಡಿದ. ಇಂಗ್ಲೀಷಿನಲ್ಲಿ ಬರೆದಿರುವ ಸುದ್ದಿಯನ್ನು ಹೇಳುವವರು ಯಾರು? ಆಗ ನಾನೂ ಊರಲ್ಲಿರಲಿಲ್ಲ. ನನ್ನ ಬಿಟ್ಟರೆ ಶ್ಯಾನುಭೋಗರೇ ಗತಿ. ಅವರಿಗೂ ಇಂಗ್ಲೀಷ್ ಬಾರದು. ಅಂತೂ ತಿಮ್ಮಯ್ಯನ ಪಾಡು ಹೇಳತೀರದು. ಆಮೇಲೆ ಶೇಕ್‌ದಾರರ ಮನೆಗೆ ಹೋಗಿ, ಅವರು ಬರುವ ವರೆಗೆ ಕಾದಿದ್ದು, ಅವರಿಂದ ಸುದ್ದಿ ತಿಳಿದನಂತೆ. ಆ ತಂತೀ ವರ್ತಮಾನ ಏನೆಂದರೆ "ನಿಮ್ಮ ತಾಯಿಗೆ ಖಾಯಿಲೆ ಹೆಚ್ಚಾಗಿದೆ. ಕೂಡಲೇ ಬರತಕ್ಕದ್ದು" ಇಷ್ಟೇ.

ತಿಮ್ಮಯ್ಯ, ಏಳುತ್ತಾ ಬೀಳುತ್ತಾ ರೈಲಿನಲ್ಲಿ ಹೊರಟ. ಕೈಲಿ ಮೂರು ಕಾಸಾದರೂ ಇರಲೆಂದು ಯೋಚಿಸಿ, ತನ್ನ ಹಸುವನ್ನು ಮಾರಿ, ಅದರಲ್ಲಿ ಬಂದ ಐವತ್ತು ರೂಪಾಯಿಯನ್ನು ಗಂಟುಹಾಕಿಕೊಂಡು ಪ್ರಯಾಣಮಾಡಿದ. ವ್ಯಸನದಿಂದಲೇ ತಿರುಪತಿ ಸೇರಿದ. ಇವರು ಇಳಿದುಕೊಂಡಿದ್ದ ಛತ್ರಕ್ಕೆ ಹೋದ. ಆ ಛತ್ರದಲ್ಲಿ ಯಾರೂ ಇರಲಿಲ್ಲ. ನೆರೆಹೊರೆಯವರನ್ನು ಕೇಳಲು, ಅವರು "ಇಲ್ಲಿದ್ದವರು ನಿನ್ನೆ ಸಂಜೆ ಬೆಂಗಳೂರು ಕಡೆಗೆ ಪ್ರಯಾಣ ಮಾಡಿದರು" ಎಂದರು. "ಆ ಮುದುಕಮ್ಮ ಏನಾದಳು?" ಎಂದು ಕೇಳಲು, "ಆ ಮುದುಕಿ ಸತ್ತುಹೋದಳು; ಮಣ್ಣು

ಮಾಡಿಬಿಟ್ಟರು. ಅಲ್ಲಿಗೂ ಒಂದು ದಿನವೆಲ್ಲಾ ಹೆಣ ಇಟ್ಟುಕೊಂಡೇ ಕಾದಿದ್ದರು. ಯಾರೂ ಬರಲಿಲ್ಲ. ಇನ್ನೇನು ಮಾಡುತ್ತಾರೆ" ಎಂದು ಉತ್ತರ ಬಂದಿತು.

ತಿಮ್ಮಯ್ಯನ ಮುಖ ಪೆಚ್ಚಾಯಿತು. ಅವನ ಪಾಡು ನಡು ಹಗಲಿನ ಸೂರ್ಯನ ಮೇಲೆ ಕಪ್ಪನೆಯ ಕಾರ್ಮೋಡ ಕವಿದಂತೆ ಆಯಿತು; ರುಚಿ ರುಚಿಯಾದ ಪಾಯಸದಲ್ಲಿ ಹುಳ ಬಿದ್ದಂತೆ ಆಯಿತು. ತಾಯಿಯೇ ಸರ್ವಸ್ವವೆಂದು ತಿಳಿದಿದ್ದ ಅವನು ಆಸ್ತಿಪಾಸ್ತಿಗಳನ್ನು ಕಳೆದುಕೊಂಡ ಬೀದಿಯ ಭಿಕಾರಿಯಂತೆ ಗೋಳಾಡಿದ. ಕಣ್ಣೀರು ಕಾವೇರಿಯಂತೆ ಹರಿಯಿತು. ಮೊಗದಲ್ಲಿನ ಕಾಂತಿ ಮಲಿನವಾಯಿತು. ದಿಕ್ಕು ತೋಚದೆ ಸ್ವಲ್ಪ ಹೊತ್ತು ಕುಳಿತ. ಸಂಜೆಯಾಯಿತು. ಸ್ವಲ್ಪ ಸಮಾಧಾನ ವಾಯಿತು. ರೈಲು ಹತ್ತಿ ಬೆಂಗಳೂರಿಗೆ ಬಂದ. ಬೆಂಗಳೂರಿನಲ್ಲಿ ಬಸ್ ಹತ್ತಿ ತನ್ನ ಹಳ್ಳಿಗೆ ಬಂದ. ತಿರುಪತಿಗೆ ಹೋಗಿದ್ದವರು ಮೊದಲೇ ಬಂದಿದ್ದರಿಂದ ತಿಮ್ಮಯ್ಯನ ತಾಯಿ ಸತ್ತಿದ್ದನ್ನು ಎಲ್ಲರಿಗೂ ಹೇಳಿದ್ದರು. ತಿಮ್ಮಯ್ಯ ಬಂದ ಕೂಡಲೇ ಊರೆಲ್ಲಾ ಅವನಿಗಾಗಿ ಪಶ್ಚಾತ್ತಾಪ ಪಟ್ಟಿತು. ಯೋಗ್ಯಳಾದ ಮುದುಕಿ ಪರಂಧಾಮವಾದಳಲ್ಲಾ ಎಂದು ಊರಿನ ಜನರು ಗೋಳಿಟ್ಟರು.

ತಿಮ್ಮಯ್ಯನಿಗೆ ಒಂದು ವಿಷಯ ಮಾತ್ರ ತನ್ನ ಮನಸ್ಸಿನಿಂದ ತೊಡೆದು ಹಾಕಲು ಸಾಧ್ಯವಾಗಲಿಲ್ಲ. "ಸಾಯುವ ಹೊತ್ತಿನಲ್ಲಿ ನಾನಿಲ್ಲದೆ ಹೋದೆನಲ್ಲಾ: ನಾನೆಂತಹ ಪಾಪಿ: ಚಂಡಾಲನಿಗಿಂತಲೂ ಕಡೆ" ಎಂಬುದೇ ಅವನ ಕೊರಗು. ಇಷ್ಟಾದರೂ ತಿಮ್ಮಯ್ಯನ ಹೆಂಡತಿ ಸ್ವಲ್ಪ ವಾದರೂ ದುಃಖಿಸಲೇ ಇಲ್ಲ. ಚಿಂತೆ ಹೆಚ್ಚಿ ತಿಮ್ಮಯ್ಯನಿಗೆ ಬುದ್ಧಿ ಕೆಟ್ಟಿತು. ಇದೇ ಸಮಯವೆಂದು ಅವನ ಅತ್ತೆಯ ಮನೆಯವರು ಆಸ್ತಿ ಪಾಸ್ತಿಯೆಲ್ಲವೂ ಹೆಂಡತಿಗೇ ಸೇರಬೇಕೆಂದು ಇವನ ಕೈಯಲ್ಲಿ ಪತ್ರ ಬರೆಸಿ ಅದಕ್ಕೆ ರುಜು ಹಾಕಿಸಿಕೊಂಡರು. "ನನಗೂ ಹೆಂಡತಿಗೂ ಸಂಬಂಧವಿಲ್ಲ. ಅವಳು ಬೇಕಾದರೆ ಬೇರೆ ಇರಲಿ: ಜೀವನಾಂಶ ಕೊಡುತ್ತೇನೆ" ಎಂದು. ಆಮೇಲೆ ಇನ್ನೊಂದು ಪತ್ರ ಹುಟ್ಟಿತು. ಇದು ತಿಮ್ಮಯ್ಯನಿಗೆ ಅರ್ಥ ವಾಗಲಿಲ್ಲ. ಅವರಿವರ ಬಲವಂತದಿಂದ ರುಜು ಹಾಕಿದ. ರುಜು ಎಂದರೆ

ನಾವು ಹಾಕುವ ರುಜುವಲ್ಲ. ಎಡಗೈ ಹೆಬ್ಬೆಟ್ಟಿನ ಗುರುತು. ಇದೇ ಓದುಬಾರದ ದಡ್ಡರ ರುಜು. ಈಗ ತಿಮ್ಮಯ್ಯನ ಹೆಂಡತಿ ಅವನ ಮನೆಯಲ್ಲಿಲ್ಲ. ತನ್ನ ತಾಯಿಯ ಮನೆಯಲ್ಲೇ ಇದ್ದಾಳೆ. ಬೇಕಾದಷ್ಟು ವರಮಾನ ದೊರೆಯುತ್ತಿದೆ. ಅವಳ ಮೈಮೇಲೆ ರಾಣಿಗಿಂತಲೂ ಹೆಚ್ಚಾಗಿ ಒಡವೆಗಳಿವೆ. ತಲೆಯ ತುಂಬ ಬಂಗಾರದ ಬಿಲ್ಲೆಗಳಿವೆ. ಆದರೆ ತಿಮ್ಮಯ್ಯನ ತಲೆಯ ತುಂಬಾ ಹೇನುಗಳಿವೆ; ಬಟ್ಟೆಯ ತುಂಬಾ ಕೂರೆಗಳಿವೆ; ತಿಮ್ಮಯ್ಯನಿಗೆ ಹೊತ್ತಿಗೆ ಸರಿಯಾಗಿ ಅನ್ನ ಹಾಕುವವರಿಲ್ಲ; ಇವನ ಯೋಗಕ್ಷೇಮ ವಿಚಾರಿಸುವವರು ದೇವರನ್ನು ಬಿಟ್ಟರೆ ಮತ್ತಾರೂ ಇಲ್ಲ."

ಉಪಾಧ್ಯಾಯರು ಇದ್ದಕ್ಕಿದ್ದ ಹಾಗೆ "ಕತೆ ಮುಗಿಯಿತು" ಎಂದರು.



# ಅರ್ಜಿಗಳ ಅವಾಂತರ

——:o:——

[illegible]ಪ್ಪನಿಗೆ ಓದು ಎಂದರೆ ಆಗದು. ಇದ್ದ ಒಂದು ಗ್ರಾಂಟ್ ಪ್ರೈಮರಿಸ್ಕೂಲನ್ನೂ ಹಾಳುಮಾಡಿಕೊಂಡ. ಸ್ಕೂಲ್ ಇನ್‌ಸ್ಪೆಕ್ಟರು ಇವರೂರಿಗೆ ತಿರುಗಿ, ತಿರುಗಿ ಸಾಕಾದರೂ ಇವನು ಮಾತ್ರ ಕಣ್ಣಿಗೆ ಕಾಣಿಸುತ್ತಿರಲಿಲ್ಲ. ಯಾವ ಅಧಿಕಾರಿ ಬಂದರೂ ಸರಿಯೆ; ಕೈಯಲ್ಲಿ ನಿಂಬೆಹಣ್ಣು, ಹೂವಿನಹಾರ. ಸ್ಕೂಲ್ ಇನ್‌ಸ್ಪೆಕ್ಟರು ಬಂದರೆ ಮಾತ್ರ ಗೈರುಹಾಜರು. ಇವನಿಗೆ ಓದುಬರೆಹ ಅಷ್ಟಾಗಿ ಬಾರದು. ತಾನೂ ಓದು ಕಲಿಯ, ಓದುವವರಿಗೂ ಅವಕಾಶ ಕೊಡ. ಇಂತಹ ಪಟೇಲ.

ಒಂದು ದಿನ ನಾನು ಇವನ ಗ್ರಾಮಕ್ಕೆ ಹೋದೆ. ಹೋದ ದಿನ ಬಹಳ ಮನ್ನಣೆ ದೊರೆಯಿತು. ಆದರೆ ಸ್ಕೂಲ್ ಸಮಾಚಾರ ಎನ್ನುತ್ತಲೇ ಅವನು - ನಮ್ಮೂರಿನಲ್ಲಂತೂ ಓದುಬರಾವು ಹೆಚ್ಚಿಬಿಟ್ಟು, ಅರ್ಜಿಗಳು ಬರಿ ಯೋರ‍್ಗಂತೂ ಲೆಕ್ಕಾ ಇಲ್ಲ, ಪಕ್ಕಾ ಇಲ್ಲ. ಹೇಳಿದ ಮಾತ ಕೇಳೋದ್ ಬಿಟ್‌ಬಿಟ್ಟು, ನನ್ನ ಮೇಲೊಂದು ಅರ್ಜಿ, ಶೇಕದಾರರ ಮೇಲೊಂದು ಅರ್ಜಿ. ಅಯ್ಯೋ ಬಿಡಿ ಸ್ವಾಮಿ, ಹೊಟ್ಟೆನಮುದ್ದೆ ತಿಂದುಕೊಂಡು ಹೊಲ ಉಳೋರಿಗೆಲ್ಲಾ ಓದಂತೆ. ಈ ಗ್ರಾಮ ಪಂಚಾಯ್ತಿ ಐತಲ್ಲಾ, ನಾನೇ ಛೇರ‍್ಮನ್ನು. ನಂಬರ್‌ದಾರ್‌ಗಳು ಇಷ್ಟೊಂದು ಜನ ಇದ್ದಾರಲ್ಲಾ. ಒಬ್ಬ ರಾದರೂ ಓದಿಲ್ಲ. ಆದರೇನು ಪಂಚಾಯ್ತಿ ನಿಂತುಹೋಗ್ತೈತಾ? ಹಾಕೋ ಹೆಬ್ಬೆಟ್ಟು ಅಂದರೆ ಎಲ್ಲಾ ಹಾಕ್ತಾರೆ. ಮೀಟಿಂಗು ಸೋಮವಾರ ಆದರೆ ಬರೋ ಆಯ್ತಾರ ರುಜು ಹಾಕಿಸಿ ಮಡಗ್ತೀನಿ. ಓದು ಬರೋರಾದ್ರೆ, ಅದೇನು, ಇದೇನು, ರೂಲ್ಸು, ರೆಗುಲೇಶನ್ನು ಏನೇನೋ ಹೇಳ್ತಾರೆ. ಹೊಟ್ಟೆನಲ್ಲಿ ನಾನು ಹೇಳೋದು ಏನೂ ಅಂದರೆ, ಓದು ಕಲಿತರೆ ಕೂಲಿನಾಲಿ ಮಾಡೋಕೆ ಆಳುಗಳು ಸಿಕ್ಕೋಕಿಲ್ಲ. ಬೇಸಾಯ ಅಂತೂ ಬಿಟ್ಟುಬಿಡಿ, ಆ ಮಾತ. ಅವೆಲ್ಲಾ ನಮ್ಮ ತಾತನ ಕಾಲ್ಕೇ ಹೋಯ್ತು. ಈಗೆಲ್ಲಿ

ಸ್ವಾಮಿ ಬೆಳೆ . . . ಪೇಟೆ ಗೀಟೆ ಅಲೆಕೊಂಡು, ಬೀಡಿ ಗೀಡಿ ಸೇದ್ಕೊಂಡು ಎಲ್ಲಾನ ಬಿದ್ದಿರೋದ್ಬಿಟ್ಟು - ಹೊಲಾ ಉಳ್ತಾರಾ? ಅದಕ್ಕೆ ಇಷ್ಟೆಲ್ಲಾ ಪುರಾಣ ಹೇಳೋದು ನಾನು. ಸ್ಕೂಲೂ ಬೇಡಾ ಮಠಾನೂ ಬೇಡ" ಎಂದು ದೊಡ್ಡ ಉಪನ್ಯಾಸಕ್ಕೆ ಆರಂಭಿಸಿಬಿಟ್ಟ.

ಇವನ ಮಾತು ಕೇಳಿ ನನಗೂ ಸ್ವಲ್ಪ ಬುದ್ಧಿ ಮಂಕಾಯಿತು. "ಏನಯ್ಯಾ ಕರಿಯಪ್ಪ! ಈಗ ಓದು ಕಲಿತು ಕೆಟ್ಟುಹೋಗಿರುವವರು ಯಾರು? ಒಂದು ಉದಾಹರಣೆ ಕೊಡುತ್ತೀಯ? ಓದು ಕಲಿತೋರೆಲ್ಲಾ ಬೇಕಾದ ಹಾಗೆ ಸಂಪಾದನೆ ಮಾಡ್ತಾ ಇದಾರೆ. ಏನಯ್ಯಾ?" ಎಂದು ನಾನು ಪ್ರಶ್ನೆ ಹಾಕಿದೆ.

ಅವನು ಈ ಮಾತಿಗೆ ನಕ್ಕು "ಸ್ವಾಮಿ ಪಕ್ಕದಹಳ್ಳಿ ಇಸ್ಕೂಲು ಮೇಷ್ಟ್ರು ವೆಂಕಟಪ್ಪನೋರು ಇದ್ದಾರಲ್ಲಾ - ಅವರು ಮಗನಿಗೆ ಬಿ.ಎ. ಪಾಸ್ ಮಾಡಿಸಿದ್ದಾರೆ. ಆದರೇನು! ತಂದೆ ಅಂತ ಸ್ವಲ್ಪವಾದರೂ ಮರ್ಯಾದೆ ಬೇಡವೇನ್ ಸ್ವಾಮಿ. ತಾನೇನೋ ದೇವಲೋಕದಿಂದ ಬಂದ ಹಂಗೆ - ಇವರೆಲ್ಲಾ ನರಕದಲ್ಲೇ ಇರೋ ಹಂಗೆ. ಆ ಹುಡುಗ್ಗೇನು ಗೊತ್ತು. . . ಅವರ ತಾತನೋರ ತಾತ ಲಂಗೋಟಿ ಇಟ್ಕೊಂಡೇ ಇದ್ದರೂ ಮೂರುಲಕ್ಷ ರೂಪಾಯಿ ಆಸ್ತಿ ಮಾಡಿದ್ದ ಸ್ವಾಮಿ. ಈ ಹುಡುಗ ಮೂರು ನೂರು ಮಾಡಲಿ ಸಾಕು. ಹೊಲ ಉಳ್ತೀಯಾ ಅಂದರೆ - ಇಲ್ಲ ಅಂತಾನೆ. ತೋಟದ ಕೆಲ್ಸಾನಾದರೂ ಮಾಡ್ತೀಯಾ ಅಂದರೆ - ನಾನೊಲ್ಲೆ ಅಂತಾನೆ. ಯಾವುದೂಬೇಡ ನಮ್ಮೂರಲ್ಲೇ ಮದುವೆನಾದ್ರೂ ಮಾಡಿಕೊಂಡು ಇನ್ನೇ ನಾದರೂ ಮಾಡಪ್ಪಾ ಅಂದರೆ - ಪೇಟೆಹೆಣ್ಣೇ ಆಗ್ಬೇಕು ಅಂತಾನೆ. ನೋಡಿ ದಿರಾ ಸ್ವಾಮಿ - ಅವರಪ್ಪನಿಗೆ-ಬಂದಭಾಗ್ಯ" ಎಂದು ನಗುತ್ತಾ ಹೇಳಿದ.

ನಾನು "ಎಲ್ಲೋ ಅವನು ಹುಡುಗ - ಇನ್ನೂ ತಿಳಿಯದು. ಹೊಸ ಹುರುಪು. ಅಷ್ಟೆ. ಆಮೇಲೆಲ್ಲಾ ಸರಿಹೋಗುತ್ತೆ" ಎಂದೆ. ಅವನು ಇನ್ನೊಂದು ದೃಷ್ಟಾಂತ ಕೊಟ್ಟ.

"ಬೀರಪ್ಪನ ಮಗ ಚಿಕ್ಕಬೀರ ಇಂಗ್ಲಿಷ್ ಅಕ್ಷರ ಕಲಿತುಕೊಂಡ. ಬೀರಪ್ಪ ಅವನ್ನ ಬೆಂಗಳೂರಿಗೆ ಕಳುಹಿಸ್ದ. ಹುಡುಗ ಆಮೇಲೆ ಹನೆರಡು ರೂಪಾಯಿ ಕಟ್ಟಿ, ಅದೇನೋ ಪರೀಕ್ಷೆ ಪಾಸ್ ಮಾಡಿದ.

ಸರಿ - ಊರಿಗೆ ಬಂದ. ಬೆಳಿಗ್ಗೆ ಕಾಫಿ ಅಂದ. ಶನಿವಾರ ಬಂದರೆ ಸಿನಿಮಾಕ್ಕೆ ಎದ್ದುಬಿಟ್ಟ. ಹೀಗೆ ತಿಂಗಳೆಲ್ಲಾ - ದಿನಾಲೂ ಎರಡು ಹೊತ್ತು ಕಾಫಿ. ವಾರಕ್ಕೊಂದುಸಲಾನಾದ್ರೂ ಸಿನಿಮಾ. ಕಾಸೆಲ್ಲಾ ಹಾಳು. ಮನೇಕಡೆ ದನ, ಕರು, ಮೇಕೆ - ಏನೂ ನೋಡಿಕೊಳ್ಳೋದಿಲ್ಲ. ಅವರಪ್ಪ ಇವನಾಟ ನೋಡಿ, "ಸರ್ರಿ, ನನ್ಮಗ ಪೇಟೆಗೆ ಹೋಗಿ ದುಡ್ಡು ಚೆಂದಾಗಿ ಕೂಡಿಡ್ತಾನೆ" ಅಂತಾ ಹೇಳಿಕೊಂಡೇ ಪ್ರಾಣ ಬಿಟ್ಟ. ಮಗನಿಗೆ ಬುದ್ಧಿ ಬರಬೇಕು - ಸರಿಹೋಗ್ಬೇಕು."

ಈ ಮಾತು ಕೇಳಿ ನನಗೆ ಮಾತಾಡಲು ಏನೂ ತೋಚಲಿಲ್ಲ. ಸುಮ್ಮನಾಗಿಬಿಟ್ಟೆ. ಸ್ವಲ್ಪ ಹೊತ್ತು ಕಳೆದಮೇಲೆ ಅವನಿಗೆ ನಿಧಾನವಾಗಿ, ವಿದ್ಯೆಯ ಮಹಿಮೆ, ಅದರ ಪ್ರಭಾವ, ವಿದ್ಯಾವಂತರ ಕೀರ್ತಿ, ಅವರ ದೇಶಸೇವೆ ಮೊದಲಾದ ಅನೇಕ ವಿಷಯಗಳನ್ನು ಹೇಳಿದೆ. ಅವನಿಗೆ ಸ್ವಲ್ಪ ಸಮಾಧಾನ ಆಯ್ತು. ನಾನು ಇರುವ ವರೆಗೂ ನನ್ನ ಮಾತು "ಸರಿ" ಎಂದ. ಆಮೇಲೆ?

ರಾತ್ರೆ ಊಟವಾದ ಮೇಲೆ ನಾವೆಲ್ಲಾ ಊರಮುಂದಲ ಚಾವಡಿ ಯಲ್ಲಿ ಹರಟೆ ಹೊಡೆಯಲು ಸಭೆ ಸೇರಿದೆವು. ಕರಿಯಪ್ಪ, ತಿಮ್ಮಯ್ಯ, ಗುಜ್ಜಾರೆಡ್ಡಿ, ಬೊಮ್ಮ ಮೊದಲಾದ ಗ್ರಾಮದ ಮುಖಂಡರೆಲ್ಲಾ ಬಂದರು. ಅಡಕೆಲೆ ಅಗಿಯುತ್ತಾ, ಕರಿಯಪ್ಪ ಮಾತಿಗೆ ಶುರುಮಾಡಿದ. "ಅರ್ಜಿಗಳು ನಮ್ಮೂರಿಂದ ಎಷ್ಟು ಹೋಗ್ಯೆತೆ. ಲೆಕ್ಕಾ ಬೇಕು ನಂಗೆ" ಎಂದ. ಗುಜ್ಜಾರೆಡ್ಡಿ ಮುಂದಕ್ಕೆ ಬಂದು ಪಟೇಲನ ಕೈಲಿದ್ದ ವೀಳೆದೆಲೆ ಯನ್ನು ಮೆತ್ತಗೆ ಕಸಿದುಕೊಂಡು ಬಾಯಲ್ಲಿ ಹಾಕಿಕೊಳ್ಳುತ್ತಾ, "ಗೌಡರೇ ಆವತ್ತು ಅಮಲ್ದಾರ್ ಸಾಹೇಬರಿಗೆ ಅರ್ಜಿ ಕೊಟ್ಟೆರಲ್ಲ. ಅದೇ ಶೇಕ್‌ದಾರರ ಮೇಲೆ ದೂರು . . ." ಎನ್ನುವಷ್ಟರಲ್ಲಿ ಗೌಡ ಬಾಯಿ "ಹಾಕಿ ಯಾವ ವಿಚಾರ?" ಎಂದ. ಗುಜ್ಜಾರೆಡ್ಡಿ "ಅದೇ ರಾಗಿ ಮಾರಾಟದ ವಿಷಯ. ಶೇಕ್ದಾರ್ರು - ಕಂಟ್ರಾಕ್ಟ್ರು ಎಲ್ಲಾ ಸೇರಿ ಮಾಡಿದ್ದ ವ್ಯಾಪಾರ. . . ." ಎಂದ. ನಾನು ಇವರ ಸಂಭಾಷಣೆಯಿಂದ ಏನೇನೋ ಹೊಸ ವಿಷಯಗಳು ತಿಳಿಯಬಹುದೆಂದು ಯೋಚಿಸಿದೆ. ಅದ್ದರಿಂದ ನಾನೂ ಬಾಯಿ ಹಾಕಿ "ಅದೇನು ವಿಚಾರ . . . ನಂಗೂ ಹೇಳಿ" ಎಂದೆ.

ಗುಜ್ಜಾರೆಡ್ಡಿ "ಅದೇನು - ವಿಷಯ ಬಿಡಿ ಸ್ವಾಮಿ - ನಾವು ಯಾರ ಮೇಲೆ ದೂರು ಬರೆದಿದ್ದೆವೊ ಅದೇ ಅರ್ಜಿಯನ್ನು ಹಿಂದಕ್ಕೆ ಕಳುಹಿಸಿದ್ದಾರೆ. ಅಮಲ್ದಾರ್ ಸಾಹೇಬರು. ಈಗ ಅರ್ಜಿ ಕೊಟ್ಟವರ ಪಾಡು ಏನು ಹೇಳ್ತೀರ?" ಎಂದ.

ಅಷ್ಟರಲ್ಲಿ ಕರಿಯಪ್ಪ ಕತೆ ಹೇಳಿದ - "ನಮ್ಮೂರಿನಲ್ಲಿ ಕಳ್ಳತನವಾಗಿ ಕೆಲವರು ರಾಗಿಕಾಳು ಮುಚ್ಚಿ ಮಡಗಿದ್ದರು. ರಾಗಿ ಶೇಕ್‌ದಾರರ ಕಾಟ ಬಲುಕಾಟವಾಗಿ ಹೋಯ್ತು. ಅವರಂತು ದಿನ ಬೆಳಗಾಗ ಬರೋದು. ಯಾರನ್ನಾದರೂ ಹಿಡಿಯೋದು. ಸಿಕ್ಕಿದ ರಾಗೀನ ದೋಚಿಕೊಂಡು ಓಡಿಹೋಗೋದು. ಇದೇನ ಕೆಲ್ಸ. ಏನು ಸ್ವಾಮಿ 'ಯುದ್ಧ ಬಂದೈತೆ. ಸೈನ್ಯಕ್ಕೆ ರಾಗಿಕಾಳು ಬೇಕು' ಅಂತಾ ಹೇಳ್ತಾ ಇರೋದೆ. ಸೈನ್ಯದಲ್ಲಿರೋರು ರಾಗಿ ತಿಂತಾರೇ? ಶೇಕ್‌ದಾರ್ರೇನೋ ಒಳ್ಳೇರೇ. ಆದರೆ ಈ ರಾಗಿ ಶೇಕ್‌ದಾರರು ಮಾತ್ರ ಬಲು ಗಟ್ಟಿಗರು. ಒಂದು ಕಾಸೂ ಇಲ್ಲದಂತೆ ದೋಚಿಬಿಟ್ಟರು ಸ್ವಾಮಿ. ಈ ಕಾಟ ನೋಡಲಾರದೆ ಊರೊಳಗಿನ ಹೈಕಳು ಅವರ್ನ ಹೊಡೆದಾಕ್ಬೇಕು ಅಂತ ಮಾಡಿದ್ದರು. ನನಗೆ ವಿಚಾರ ತಿಳಿದು "ಬೇಡಾ - ಅಂತಾ ಕೆಲಸ ಮಾಡ್ಬೇಡಿ" ಎಂದೆ. ಇನ್ನು ಕೆಲವರು ಒಂದು ಅರ್ಜಿಯನ್ನಾದರೂ ಸಾಹೇಬರಿಗೆ ಬರೆಯೋಣ - ಎಂದರು. ಸರಿ, ಅರ್ಜಿ ಹೋಯ್ತು. ಈ ವಿಷಯ ತಿಳಿದು ಇನ್ನು ಕೆಲವರು ಶೇಕ್‌ದಾರರ ಮಾತು ಕೇಳಿ ಇನ್ನೊಂದು ಅರ್ಜಿ ಕೊಟ್ಟರು."

"ಎಲ್ಲಿ ನಿಮ್ಮ ಅರ್ಜಿ ನೋಡೋಣ . . ."

"ಇಲ್ಲ ಸ್ವಾಮಿ, ಅದು ಇಲ್ಲಿ ಬರಲೇ ಇಲ್ಲ.

"ಅದರ ನಕಲೂ ಇಲ್ಲವೆ?"

"ನಕಲೂ ಇಲ್ಲ, ಗಿಕಲೂ ಇಲ್ಲ. ಒಂದು ಸಲ ಬರೆಸೋಕೆ ಪ್ರಾಣಾನೆ ಬಿಟ್ಟರಂತೆ. ಇನ್ನೆರಡು ಸಲ ಬರಸ್ಬೇಕಾದರೆ ಆಯಿತು. . ."

"ಹೋಗಲಿ . . . ಆಮೇಲೆ . . ."

"ಆಮೇಲೇನು . . . ಕಳ್ಳತನವಾಗಿ ರಾಗಿ ಇಟ್ಟರೋರ್ನ ನಾವೆಲ್ಲಾ ಕರಸಿ ಕೇಳಿ, ಒಂದು ತೀರ್ಮಾನ ಮಾಡಿದ್ದಾಯಿತು. ಆ ರಾಗಿಯನ್ನು ಸರ್ಕಾರಿ ಧಾರಣೆಗೆ ಈ ಊರಿನ ಬಡಬಗ್ಗರಿಗೆ ಕೊಟ್ಬುಬಿಡೋದು.

ಸರ್ಕಾರಕ್ಕೆ ಕೊಡಕೂಡದು ಅಂತ. ಶೇಕ್‌ದಾರರು ಈ ವಿಷಯ ತಿಳಿಕೊಂಡೇ ಏನೇನೋ ತಂತ್ರ ಮಾಡಿಬಿಟ್ಟರು. ಆಮೇಲೆ ರಾಗಿ ಬಡವರಿಗೂ ದಕ್ಕಲಿಲ್ಲ. ಸರ್ಕಾರಕ್ಕೂ ಸಿಕ್ಕಲಿಲ್ಲ." ಅಷ್ಟರಲ್ಲಿ ನಾನು ಬಾಯಿ ಹಾಕಿ "ರಾಗಿಯೆಲ್ಲಾ ಏನಾಯಿತು?" ಎಂದೆ.

ಕರಿಯಪ್ಪ ಮುಂದುವರಿದ. "ಶೇಕ್‌ದಾರ್ರು ಇಬ್ಬರು ಕಂಟ್ರಾಕ್ಟ್ರು ಸೇರಿ ಅಲ್ಲಲ್ಲೇ ಮಾರಿಬಿಟ್ಟರಂತೆ. ಬಂದ ಲಾಭಾನ ಇಬ್ಬರೂ ತಲಾ ಹಂಚಿಕೊಂಡರಂತೆ. ಅದೆಲ್ಲಾದರೂ ಹೋಗಲಿ ಬಿಡಿ. ಶೇಕದಾರ್ರ ಮೇಲೆ ದೂರು ಕೊಟ್ಟರೆ ಅದೇ ಅರ್ಜೀನ ಅದೇ ಶೇಕ್‌ದಾರ್ರಿಗೇ ಕಳಿಸವ್ರಲ್ಲಾ - ತಾಲ್ಲೂಕ್ ಕಛೇರಿ ಗುಮಾಸ್ತೇರು. ಈಗೇನಾಗ್ಯೆತೆ . . . . ಆ ಶೇಕ್‌ದಾರ್ರು ಯಾರುಯಾರು ರುಜು ಇಲ್ಲವೆ ಹೆಬ್ಬೆಟ್ಟು ಹಾಕಿದ್ದರೋ ಅವರ ಮೇಲೆಲ್ಲಾ ವಿಷ ಕಾರ್‍ತಾ ಇದ್ದಾರೆ. ಸ್ವಾಮಿ ಬೇಡಪ್ಪಾ ಬೇಡ - ಅವರ ಪಾಡು. ಅಮಲ್ದಾರ್ ಸಾಹೇಬರೇನೋ ಒಳ್ಳೇರೆ . . . . ಆದರೆ ಏನೋ ಹೀಗಾಗೋಯ್ತು."

ನಾನು "ಛೆ, ಛೆ, ಅಮಲ್ದಾರರು ಆ ಶೇಕ್‌ದಾರ್ರಿಗೆ ತಿಳೀಲಿ. . . . ಇಂಥಾ ತಕರಾರು ಅರ್ಜಿ ಬಂದ್ಯೆತೆ ಅಂತ ಹೇಳಿ, ಈ ಉಪಾಯ ಮಾಡಿರ ಬಹುದು. ಶೇಕ್‌ದಾರ್‌ಗೆ ಆ ಅರ್ಜಿಯನ್ನು ನೋಡಿದರೆ ಅವಮಾನ ಆಗೋದಿಲ್ವೆ. ನಿಮ್ಮಂತಹವರೆಲ್ಲಾ ಸೇರಿ ಶೇಕ್‌ದಾರರಿಗೂ ಊರಿನ ವರಿಗೂ ಒಪ್ಪಂದ ಮಾಡಿಸಿಬಿಡಿ. ಇದೆಷ್ಟರ ಕೆಲಸ" ಎಂಬುದಾಗಿ ಹೇಳಿದೆ. ಅಷ್ಟರಲ್ಲಿ ಬೊಮ್ಮ ಎದ್ದು,

"ಎಲ್ಲಾ ಸುಳ್ಳುಸುಳ್ಳು ಸ್ವಾಮಿ. ಅಮಲ್ದಾರರು ಹಾಗೆಲ್ಲಾ ಮಾಡುತ್ತಾರೆಯೇ? ಆ ಶೇಕ್‌ದಾರರು ಸುಮ್ಮನೆ ಹೇಳ್ತಾರೆ ಅಷ್ಟೆ. ಇವರೂ ನಂಬುತ್ತಾರೆ. ಅದಿರಲಿ, ಶ್ಯಾಮರಾಯರ ಮಗ ರಾಮಸ್ವಾಮಿ ಬಲು ಬುದ್ಧಿವಂತ. ಅವನು ಇಂಗ್ಲೀಷ್ ಇಸ್ಕೂಲಿಗೆ ಹೋಗ್ತಿದ್ದ. ಅವನು ಮೊನ್ನೆ ಯಾರಿಗೋ ಅರ್ಜಿಬರಕೊಟ್ಟು ನಾಲ್ಕಾಣೆ ಸಂಪಾದನೆ ತಂದ ಸ್ವಾಮಿ . . . . ಇಲ್ನೋಡಿ ಇಲ್ಲೊಂದು ಅರ್ಜಿ ನನ್ನ ತಾವ ಐತೆ. ಏನು ಅರ್ಜಿಗಳೋ ಮೇಲಕ್ಕೆ ಹೋದರೆ ಜವಾಬೇ ಇಲ್ಲ" ಎಂದು ಹೇಳುತ್ತಾ ಆ ಅರ್ಜಿಯನ್ನು ತೆಗೆದು ನನ್ನ ಕೈಗೆ ಕೊಟ್ಟ.

ನಾನು ಓದಿದೆ. ಅದು ಹೀಗಿತ್ತು :—

"ಮುಳುಗೂರು ತಾಲ್ಲೂಕ್ ತೇಲೂರು ಹೋಬಳಿ ಈಜೀಪುರದಲ್ಲಿ ವಾಸಮಾಡುವ ನಾವು ಬರೆದುಕೊಳ್ಳುವುದೇನೆಂದರೆ: — ನಮ್ಮ ಗ್ರಾಮಕ್ಕೆ ದಯಮಾಡಿಸುವ ಇಸ್ಕೂಲ್ ಮೇಷ್ಟರ್ಗ್ಗೂ, ಹಂದಿ ಸಾಕುವ ತಿಮ್ಮನಿಗೂ ಜಗಳ ಆಗಿ ಮೂರು ದಿನಗಳಾಯಿತು. ಈಗ ಮೇಷ್ಟರ ಮನೆಯಲ್ಲಿ ಕಳ್ಳತನ ಆಗಿರುತ್ತೆ. ತಾವು ದಯವಿಟ್ಟು ಪತ್ತೇ ಮಾಡಿಕೊಡಬೇಕಾಗಿ ಕೋರುತ್ತೇವೆ."

ಅರ್ಜಿಯನ್ನು ನೋಡಿ ಒಂದೆರಡು ಉಪಚಾರದ ಮಾತು ಹೇಳಿ ಬೊಮ್ಮನಿಗೇ ಹಿಂದಕ್ಕೆ ಕೊಟ್ಟುಬಿಟ್ಟೆ. ಇನ್ನೊಬ್ಬ ಇನ್ನೊಂದು ಸುದ್ದಿ ಹೇಳಿದ. ಮತ್ತೊಬ್ಬ ಲೈಸೆನ್ಸ್‌ಗಾಗಿ ಅರ್ಜಿ ಹಾಕಿದ ಕತೆ ಹೇಳಿದ. ರಾಮಯ್ಯ ಜಮೀನು ತಕರಾರು ಬಂದಿರುವ ಸುದ್ದಿ ಹೇಳಿದ. ಒಟ್ಟಿನಲ್ಲಿ ತಾಲ್ಲೂಕ್ ಆಫೀಸಿಗೆ ಹೋಗುವ ಅರ್ಜಿಗಳೇ ಹೆಚ್ಚು. ಒಂದೆರಡು ಸ್ಕೂಲ್ ಇನ್‌ಸ್ಪೆಕ್ಟರಿಗೆ, ಎರಡುಮೂರು ವ್ಯವಸಾಯದ ಇಲಾಖೆಯವರಿಗೆ. ನಾಲ್ಕೈದು ಪೋಲೀಸ್ ಇನ್‌ಸ್ಪೆಕ್ಟರಿಗೆ. ಅವರಿಗೆ ಬೇಕಾದ್ದೆಲ್ಲಾ ಲೈಸೆನ್ಸುಗಳು, ಗೊಬ್ಬರದ ಮೂಟೆಗಳು, ಗಾಡೀ ಸಾಮಾನುಗಳು, ಕಳ್ಳರ ಪತ್ತೆ, ಖಾತೆ ಬದಲಾವಣೆ, ಕಂದಾಯದ ರಶೀತಿ ವೊದಲಾದುವು.

ವಿದ್ಯಾವಂತರು ಹೆಚ್ಚಿದಷ್ಟೂ ಪತ್ರವ್ಯವಹಾರ ಹೆಚ್ಚಾಗುತ್ತದೆ. ವ್ಯವಹಾರ ಹೆಚ್ಚಾದರೆ ನಷ್ಟವೇನೂ ಇಲ್ಲ. ಕಾಗದ ನಷ್ಟ ಅಷ್ಟೆ. ಆದರೆ ಅದರಿಂದ ಅನುಕೂಲವೇ ಹೊರತು ಅನಾನುಕೂಲವಿಲ್ಲ.

ಹೀಗೆ ಅನೇಕ ವಿಚಾರಗಳು ಚರ್ಚಿಸಲ್ಪಟ್ಟುವು. ರಾತ್ರಿ ಹನ್ನೆರಡು ಆಯಿತು. ನಿದ್ದೆ ಹೊತ್ತಾಯಿತು. ಎಲ್ಲರೂ ಹೊರಟರು. ನನ್ನ ಕಿವಿಯಲ್ಲಿ ಸ್ವಲ್ಪ ಹೊತ್ತು "ಅರ್ಜಿಗಳು, ಅರ್ಜಿಗಳು" ಎಂದು ಮೊರೆಯುತ್ತಿತ್ತು. ಆದರೆ "ಮೇಲಕ್ಕೆ ಹೋದ ಅರ್ಜಿಗೆ ಜವಾಬೇ ಇಲ್ಲ" ಅಂತ ಬೊಮ್ಮ ಹೇಳಿದ ಮಾತು ಸ್ಮರಣೆಗೆ ಬರುತ್ತಲೇ ಇತ್ತು.

"ಅರ್ಜಿಗಳ ಅವಾಂತರ" - ಎಷ್ಟೊ ಹೊತ್ತಾದರೂ ನಿದ್ದೆಯೇ ಬರಲಿಲ್ಲ.



# ದೇವರಿಗೊಂದು ಅರ್ಜಿ

——::——

ನಮ್ಮೂರಲ್ಲಿ ಎರಡು ದೇವಸ್ಥಾನಗಳಿವೆ. ಒಂದು ಈಶ್ವರನ ದೇವಸ್ಥಾನ, ಇನ್ನೊಂದು ಚೆನ್ನರಾಯಸ್ವಾಮಿ ದೇವಸ್ಥಾನ. ಬಹುಕಾಲದ ಹಿಂದೆ ಇಬ್ಬರು ಅರ್ಚಕರಿದ್ದರು. ಅವರಿಬ್ಬರಿಗೂ ಮನಸ್ತಾಪ ಇದ್ದೇ ಇತ್ತು. ಅವರ ಜಗಳ ಬಿಡಿಸಲು ಯಾರಿಂದಲೂ ಸಾಧ್ಯವಿರಲಿಲ್ಲ.

ಆಗ್ಗೆ ಶಾನುಭೋಗರ ದವಲತ್ ಬಹಳ ಚೆನ್ನಾಗಿತ್ತು. ಅವರ ಮಾತಿಗೆ ಪ್ರಾಶಸ್ತ್ಯ ದೊರೆಯುತ್ತಿತ್ತು. ಒಂದುದಿನ ಈ ಅರ್ಚಕರ ಜಗಳ ನಡೆದು ಅದರ ಸಂಗತಿ ಇವರ ಕಿವಿಗೂ ಬಿತ್ತು. ಮಾರನೇ ದಿನವೇ ಇಬ್ಬರೂ ಫಿರ್ಯಾದು ತಂದರು. ಸರಿ; ಶಾನುಭೋಗರು ತಮಗೆ ತಿಳಿದ ಚಮತ್ಕಾರವನ್ನೆಲ್ಲ ಖರ್ಚು ಮಾಡಿದರು. ಇಬ್ಬರೂ ರಾಜಿಯಾಗಲೇ ಇಲ್ಲ. ಅವರ ಜಗಳ ಅವರಿಗೆ ಮಾತ್ರ ಅನ್ವಯಿಸಿದರೆ ಚಿಂತೆಯಿಲ್ಲ. ಒಂದೊಂದು ಸಲ ದೇವರ ಬುಡಕ್ಕೇ ಧಕ್ಕೆ ತಗಲುವಂತಿತ್ತು. "ವಿಷ್ಣು ಸ್ತ್ರೀಲೋಲ" ಎಂದು ಒಬ್ಬ ಹೇಳಿದರೆ, "ಈಶ್ವರ ಭಿಕಾರಿ, ಭಿಕ್ಷೆಗಾರ" ಎಂದು ಇನ್ನೊಬ್ಬ ಹೇಳುತ್ತಿದ್ದ.

ಅಂತೂ ಇವರ ಜಗಳ ಊರೆಲ್ಲಾ ಹರಡಿ, ಬ್ರಾಹ್ಮಣರಲ್ಲಿಯೂ ಶಂಕೆ ಹುಟ್ಟಿತು. ಅರ್ಚಕರಿಗೆ ಶಿಫಾರ್ಸು ಮಾಡಲು ಬಂದವರು ಅವರವರು ಅವರವರ ಪಕ್ಷಪಾತಿಗಳಾಗುತ್ತಿದ್ದರು. ಈ ಅವಾಂತರವನ್ನು ಮೇಲಿನ ಅಧಿಕಾರಿಗಳಿಗೆ ತಿಳಿಸಿ, ಇವರಿಗೆ ತಕ್ಕ ಶಿಕ್ಷೆ ಮಾಡಿಸಬೇಕೆಂದು ಶಾನುಭೋಗರು ನಿರ್ಧರಿಸಿದರು.

ಒಂದು ದಿನ ಸುಭೇದಾರರು ನಮ್ಮೂರಿಗೆ ಜಮಾಬಂದಿಗೆ ಬಂದರು. ಶೇಕದಾರ, ಸರದಾರ ಮೊದಲಾಗಿ ಎಲ್ಲರೂ ಸೇರಿದರು. ಜನಸಂದಣಿ ಹೆಚ್ಚಿತು. ಅವರು ತಮ್ಮ ಕೆಲಸ ಮುಗಿಸಿಕೊಂಡು ಹೊರಡುವುದರಲ್ಲಿದ್ದರು.

ಅಷ್ಟರಲ್ಲಿ ಈಶ್ವರನ ಪೂಜಾರಿ ಓಡಿಬಂದು, ಸುಭೇದಾರರಿಗೆ ನಮಸ್ಕಾರ ಮಾಡಿ, "ಸ್ವಾಮಿ! ನನ್ನದೊಂದು ಪ್ರಾರ್ಥನೆ. ತಾವು ಪರಾಂಬರಿಸ ಬೇಕು" ಎಂದ. ಅವರು "ಏನದು" ಎಂದರು.

ಇವನು "ಮಹಾಸ್ವಾಮಿ! ಈ ಊರಿನ ಈಶ್ವರನ ದೇವಸ್ಥಾನ ದಲ್ಲಿ ನಾನೊಬ್ಬ ಅರ್ಚಕ. ನನಗೊಬ್ಬ ವೈರಿ ಇದ್ದಾನೆ. ಅವನೇ ಇನ್ನೊಬ್ಬ ಅರ್ಚಕ. ಅವನು ಸದಾ ತನ್ನ ದೇವರನ್ನೇ ಹೊಗಳಿಕೊಂಡು ಸುಳ್ಳು ಕತೆಗಳನ್ನು ಹುಟ್ಟಿಸಿ, ಜನರಿಂದ ಹಣ ಸಂಪಾದಿಸುತ್ತಾನೆ. ನಾನು ಅದನ್ನು ಚೆನ್ನಾಗಿ ಬಲ್ಲೆ. ಈ ವಿಷಯವನ್ನು ಕೆಲವರಿಗೆ ತಿಳಿಸಿದೆ. ಅವರು ಅವನನ್ನು ಮೋಸಗಾರನೆಂದು ದೂರಮಾಡಿದರು. ಅವತ್ತಿನಿಂದ ನನ್ನ ಮೇಲೆ ಕೋಪ. ತಾವು ವಿಚಾರಿಸಬೇಕು" ಎಂದನು.

ಅವರು ನಗುತ್ತಾ "ಆಗಲಿ, ಅರ್ಜಿ ಬರೆದುಕೊಡಿ" ಎಂದರು. ಇವನಿಗೆ ಬರೆಯಲು ಬರುತ್ತಿರಲಿಲ್ಲ. ಆದ್ದರಿಂದ ಬೇರೊಬ್ಬನ ಸಹಾಯ ವನ್ನು ಅಪೇಕ್ಷಿಸಬೇಕಾಯಿತು. ಸರಿ, ಅವನು ಅಲ್ಲಿಯ ಜ್ಯೋತಿಷ್ಕರಾದ ವೆಂಕಟೇಶಭಟ್ಟರ ಹತ್ತಿರ ಹೋಗಿ ಬರುವಷ್ಟರಲ್ಲಿ ಸುಭೇದಾರರು ಹೊರಟೇ ಹೋಗಿದ್ದರು. ಇಷ್ಟೆಲ್ಲಾ ನಡೆಯುವಾಗ್ಗೆ ಚೆನ್ನಕೇಶವಸ್ವಾಮಿ ದೇವ ಸ್ಥಾನದ ಪೂಜಾರಿ ಜನಗಳ ಸಹಾಯ ಪಡೆದು, ಈಶ್ವರನ ಪೂಜಾರಿ ಯನ್ನು ಹಿಡಿದು ಹೆದರಿಸಬೇಕೆಂದು ಹವಣಿಸುತ್ತಿದ್ದ.

ಆದರೆ ಶಾನುಭೋಗರ ಬೆಂಬಲ ಈಶ್ವರನಗಿದ್ದುದರಿಂದ, ಯಾವ ಉದ್ದೇಶವೂ ಸಫಲವಾಗಲಿಲ್ಲ. ಹೀಗೆ ಎರಡು ದಿನ ಕಳೆದ ಮೇಲೆ ಚೆನ್ನ ಕೇಶವನ ಗುಡಿ ಪೂಜಾರಿಯು ಒಂದು ಅರ್ಜಿ ಬರೆದು ಸುಭೇದಾರರಿಗೆ ಕಳು ಹಿಸಲು ಏರ್ಪಾಡು ಮಾಡುತ್ತಿದ್ದ. ಇದನ್ನರಿತು ಶಾನುಭೋಗರು "ನನಗೆ ಐದು ರೂಪಾಯಿ ಕೊಟ್ಟರೆ ಈ ಅರ್ಜಿಯನ್ನು ಬೇಗನೆ ತಲುಪಿಸಿ ನಿನಗೆ ಬೇಕಾದ ಸಹಾಯ ಮಾಡುತ್ತೇನೆ" ಎಂದರು; ಈ ವಿಚಿತ್ರವಾದ ವರ್ತನೆ ಯನ್ನು ಕಂಡು ಚೆನ್ನಕೇಶವನ ಪೂಜಾರಿಯಾದ ಕೃಷ್ಣಾಚಾರಿ, ಬೆರಗಾಗಿ ಐದು ರೂಪಾಯಿ ಕೊಡಲೊಪ್ಪಿದ. ಶಾನುಭೋಗರು ಅದರಿಂದ ಸಂತುಷ್ಟ ರಾಗದೆ, ಅವನ ಪಕ್ಷ ವಹಿಸಿ, ಸುಳ್ಳು ಕಥೆಗಳಿಗೆ ಪ್ರೋತ್ಸಾಹ ಕೊಟ್ಟು ಜನರಿಂದ ಸಂಪಾದನೆ ಮಾಡಲು ಆರಂಭಿಸಿದರು.

ಇದನ್ನು ಕಂಡು ಈಶ್ವರನ ಪೂಜಾರಿ ಲಿಂಗಣ್ಣನಿಗೆ ತುಂಬಾ ಕೋಪ ಬಂತು. ಆಗ ತನ್ನ ಅರ್ಜಿಯನ್ನು ದೇವರಿಗಾದರೂ ಹಾಕಿಕೊಂಡು ಜಗಳ ಫೈಸಲ್ಮಾಡಿಕೊಳ್ಳಬೇಕೆಂದು ಆಲೋಚಿಸಿದ. ಒಂದು ದಿನ ರಾತ್ರಿ ಅವನು ದೇವಸ್ಥಾನದಲ್ಲಿ ಪ್ರಾರ್ಥನೆ ಮಾಡುತ್ತಿದ್ದ. ಇದನ್ನು ನೋಡಿ, ಅಲ್ಲಿಯೇ ನಿಂತು ಎಲ್ಲವನ್ನೂ ಕೇಳಿಸಿಕೊಂಡ ಶಾನುಭೋಗರ ಮಗನಿಗೆ ಅಸ್ಪಷ್ಟವಾಗಿ ಇಷ್ಟು ಮಾತ್ರ ಕೇಳಿಸಿತು, "ಓ ದೇವರೆ ಎಲ್ಲವೂ ನಿನ್ನ ಲೀಲೆ. ನೀನು ಈಶ್ವರ ಎಂದು ಹೆಸರಿಟ್ಟುಕೊಂಡಿದ್ದಿ. ಆ ದೇವರು ಚೆನ್ನಕೇಶವ ಎಂದು ಹೆಸರಿಟ್ಟುಕೊಂಡಿದ್ದಾನೆ. ಆದರೇನು? ಇರುವುದು ಒಬ್ಬನೇ ದೇವರಲ್ಲವೇ? ನಿನ್ನನ್ನು ನಾನು ಕೇಳಿಕೊಂಡರೆ ನೀನು ಏನೂ ಮಾಡಲಾರೆಯಾ? ನಾನೊಬ್ಬ ಬಡವ, ಊರಿನವರೆಲ್ಲಾ ಮೋಸಕ್ಕೆ ಬೆರಗಾಗುತ್ತಿದ್ದಾರೆ. ಅವರಲ್ಲಿ ಶ್ರದ್ಧೆ ಭಕ್ತಿಗಳೇ ಇಲ್ಲ. "ಶ್ರದ್ಧಾಹಿ ಪರಮಾಗತಿಃ" ಎಂಬ ಆರ್ಯೋಕ್ತಿ ಅವರಿಗೆ ತಿಳಿಯದಲ್ಲಾ! ಮೊದಲು ಜನರನ್ನು ಉದ್ಧರಿಸು."

ಶಾನುಭೋಗರ ಮಗನಿಗೆ ಅಚ್ಚರಿಯುಂಟಾಗಿ ಅವನನ್ನು ಹೊರಕ್ಕೆ ಕರೆದು, "ಲಿಂಗಣ್ಣಾ ನೀನು ಹೇಳುವುದು ಸತ್ಯ. ಬ್ರಹ್ಮಜ್ಞಾನವಿದ್ದರೆ ಮಾತ್ರ ಅವನು ಬ್ರಾಹ್ಮಣಿ: ಉಳಿದವರೆಲ್ಲ ಕೇವಲ ಆಡಂಬರಕ್ಕೆ ಬೆರಗಾದವರು. ದೇವರು ಏನು ಕೊಟ್ಟರೂ ಸ್ವೀಕರಿಸುತ್ತಾನೆ. "ಒಂದು ಫಲ, ಒಂದು ಹೂ, ಒಂದು ಬೊಗಸೆ ನೀರು ಇವುಗಳನ್ನು ಪ್ರೀತಿಯಿಂದ ತಂದುಕೊಟ್ಟರೆ, ಸ್ವೀಕರಿಸುವನು" ಎಂಬುದಾಗಿ ಶ್ರೀಕಷ್ಣನು ಕುಚೇಲನಿಗೆ ಹೇಳಿದ್ದಾನೆ. ಆದಕಾರಣ ನಿಜವಾದ ಭಕ್ತಿ ಅಥವಾ ಹೃತ್ಪೂರ್ವಕವಾದ ಪ್ರೇಮ ದೇವರಲ್ಲಿರಬೇಕು. ನೀನು ಹೇಳುವುದೇ ಸತ್ಯವಾದರೆ, ದೇವರು ನಿನಗೆ ಒಳ್ಳೆಯದನ್ನು ಮಾಡುತ್ತಾನೆ" ಎಂದು ಉಪನ್ಯಾಸವನ್ನೇ ಮಾಡಿಬಿಟ್ಟ.

ಶಾನುಭೋಗರ ಮಗ ಸಂಸ್ಕೃತ ವ್ಯಾಸಂಗ ಮಾಡಿದವ. ವಿದ್ಯಾವಂತ. ಇವನಿಗೆ ಲಿಂಗಣ್ಣನ ಮೇಲೆ ಕನಿಕರಹುಟ್ಟಿತು.

ದಿನವೂ ಲಿಂಗಣ್ಣನಿಗೆ ಉಪನಿಷತ್ತಿನ ಕಥೆಗಳನ್ನೆಲ್ಲಾ ಹೇಳಿ ಸುಜ್ಞಾನದ ಬೆಳಕಿಗೆ ತಂದುಬಿಟ್ಟ. ಲಿಂಗಣ್ಣ ಅವರಿವರ ಮಾತುಗಳಿಗೆ ಕಿವಿಗೊಡು

ವುದನ್ನು ಬಿಟ್ಟುಬಿಟ್ಟು ಅನೇಕ ಅಧಿಕಾರಿಗಳಲ್ಲಿ ಧನಮದವಿದೆಯೆಂದು ಚೆನ್ನಾಗಿ ತಿಳಿದ. "ಹಾಗಾದರೆ ನಾನು ಅಂತಹ ಮದಾಂಧಕಾರರಿಗೆ ಅರ್ಜಿ ಏಕೆ ಹಾಕಿಕೊಳ್ಳಬೇಕು. ನೇರವಾಗಿ ದೇವರಿಗೇ ಹಾಕಿದ ರಾಯಿತು" ಎಂದು ಮನಸ್ಸಿನಲ್ಲಿ ನಿರ್ಧರಮಾಡಿಕೊಂಡ.

ಒಂದು ದಿನ ಯಾರಿಗೂ ಹೇಳದೆ ಕೇಳದೆ ಬೆಂಗಳೂರಿಗೆ ಬಂದ. ಆಗ ತಾನೇ ಪ್ರಚಾರಕ್ಕೆ ಬಂದಿದ್ದ ಅಂಚೆಯ ಆಫೀಸಿಗೆ ಹೋಗಿ, ತನ್ನ ಅರ್ಜಿಯನ್ನು ರವಾನೆ ಮಾಡಲು ಖರ್ಚೆಷ್ಟಾಗುವುದೆಂದು ಕೇಳಿದ. ಅಲ್ಲಿದ್ದ ಮುಖ್ಯಗುಮಾಸ್ತ ಕಾಗದವನ್ನು ನೋಡಿ "ಯಾರಿಗೆ?" ಎಂದ.

"ದೇವರಿಗೆ" ಎಂದುತ್ತರ ಬಂತು.

"ಇದು ಸಾಧ್ಯವಿಲ್ಲ".

"ಸಾಧ್ಯವಿಲ್ಲ - ಎಂತಹ ಮಾತು?"

"ಹೌದು, ದೇವರೆಲ್ಲಿದ್ದಾನೆ?"

"ಛೀ, ನಾಸ್ತಿಕ. ದೇವರಿಲ್ಲದೇ ಉಂಟೇ?"

"ಇರಬಹುದು. ಆದರೆ?"

"ಮುಚ್ಚೋ ಬಾಯಿ. ದೇವರಿಲ್ಲವೆನ್ನುತ್ತೀಯಾ?" ಎಂದು ಲಿಂಗಣ್ಣ ಗದ್ದರಿಸಿದ; ಆಫೀಸಿನಲ್ಲಿದ್ದ ಮುಖ್ಯಾಧಿಕಾರಿ ಬಂದು, ಎಲ್ಲ ವನ್ನೂ ವಿಚಾರಿಸಿ, ನಸುನಗುತ್ತ "ಏನ್ರೀ, ಏಷ್ಟು ಖರ್ಚೂ ಇಲ್ಲ, ಹೋಗಿ ನಿಮಗಾಗಿ ಏನೂ ಇಲ್ಲದೆ ರವಾನೆ ಮಾಡುತ್ತೇವೆ" ಎಂದರು.

ಲಿಂಗಣ್ಣನಿಗುಂಟಾದ ಬ್ರಹ್ಮಾನಂದ ಹೇಳಲಸಾಧ್ಯ. ಅವನ ಸಂತಸಕ್ಕೆ ಎಲ್ಲೆಯಿಲ್ಲ, ಮಿತಿಯಿಲ್ಲ. ಅಂತೂ ತಾನು ಧನ್ಯನೆಂದು ಹಿಗ್ಗಿ ಹಿಂತಿರುಗಿದ.

ಹಾಗೂ ಹೀಗೂ ಕಾಲ ಕಳೆಯಿತು. ಲಿಂಗಣ್ಣ ಎಲ್ಲಾ ವ್ಯವಹಾರ ಬಿಟ್ಟುಬಿಟ್ಟ. ತನಗೆ ಇದ್ದ ಹೆಂಡತಿಯೂ ಕಾಲಾಧೀನಳಾಗಿದ್ದುದರಿಂದ ಅವನಿಗೆ ಮತ್ತೂ ಅನುಕೂಲವಾಯಿತು. ನಿತ್ಯವೂ ಭಗವಂತನ ಧ್ಯಾನ ಮಾಡುವುದು, ಪೂಜೆಮಾಡುವುದು ಮುಂತಾದ ಸತ್ಕರ್ಮಗಳಲ್ಲಿ ನಿರತ ನಾದ; ದೇವರಿಗೆ ಕರುಣೆ ಹುಟ್ಟಿರಬೇಕಲ್ಲವೇ?

ಇತ್ತ ಕೃಷ್ಣಾಚಾರಿ ಶುದ್ಧ ಪಟಿಂಗನಾಗಿ, ಸರ್ಕಾರಿ ಅಧಿಕಾರಿ ಗಳನ್ನು ತನ್ನ ವಶಮಾಡಿಕೊಂಡು, ಯದ್ವಾತದ್ವಾ ವರ್ತಿಸತೊಡಗಿದ.

ತನ್ನ ದೇವರೊಬ್ಬನನ್ನು ಬಿಟ್ಟು, ಇನ್ನು ಯಾವ ದೇವರನ್ನೂ ಅವನು ನಂಬುತ್ತಿರಲಿಲ್ಲ.

ಹೀಗೆ ಬಹಳ ದಿನಗಳು ಕಳೆದುವು. ಒಂದು ದಿನ ಅಂಚೆಯ ಜವಾನನು ಬಂದು, "ಲಿಂಗಣ್ಣನವರೇ, ನಿಮ್ಮ ಅರ್ಜಿಯು ನೆನಪಿದೆಯೇ? ಅದರಲ್ಲಿ ನೀವು ಬರೆದಿರುವ ನೂರು ರೂಪಾಯಿಗಳ ಬದಲು ಐವತ್ತು ರೂಪಾಯಿಗಳು ಮಾತ್ರ ಬಂದಿದೆ. ತಾವು ತೆಗೆದುಕೊಳ್ಳಿರಿ" ಎಂದು ಹೇಳಿ ಐವತ್ತು ರೂಪಾಯಿಗಳನ್ನು ಸುರಿದ. ಲಿಂಗಣ್ಣನಿಗೆ ಆಶ್ಚರ್ಯವಾಯಿತು. ಶಾನುಭೋಗರ ಮಗ ಇದನ್ನು ಕೇಳಿ ಓಡಿಬಂದ. ಅವನಿಗೂ ಆಶ್ಚರ್ಯವಾಯಿತು. ಊರೆಲ್ಲಾ ಸಭೆ ಸೇರಿತು. "ಲಿಂಗಣ್ಣನಿಗೆ ದೇವರಿಂದ ಹಣಬಂದಿದೆ! ಅವನು ನಿಜವಾಗಿಯೂ ದೈವಭಕ್ತ" ಎಂದು ಕೂಗಿತು.

ಅಂಚೆಯವನನ್ನು ಎಲ್ಲರೂ ಕೇಳುವವರೇ. ಆದರೆ ಅವನು ಸರಿಯಾದ ವೃತ್ತಾಂತವನ್ನು ಹೇಳಲಿಲ್ಲ. ಕಡೆಗೆ ಗುಂಪೆಲ್ಲ ಚೆದುರಿದಮೇಲೆ ಲಿಂಗಣ್ಣನೇ ಕೇಳಿದ:—"ಏನಯ್ಯಾ, ಯಾರಿಂದ ಬಂತು ಈ ಹಣ?"

"ಮಹಾಸ್ವಾಮಿಗಳಿಂದ."

"ಯಾರವರು?"

"ನಮ್ಮ ಮಹಾರಾಜರು."

"ಅವರಿಂದ ಹೇಗೆ ಬಂದಿತು?"

"ನಿಮ್ಮ ಅರ್ಜಿಯನ್ನು ನಮ್ಮ ರಾಜರಿಗೆ ಕಳುಹಿಸಿದ್ದರು. ಅದಕ್ಕಾಗಿ."

"ಓಹೋ! ಈಗ ತಿಳಿಯಿತು. ರಾಜನ ಮೂಲಕ ದೇವರಿಗೆ ಪತ್ರ ವ್ಯವಹಾರ ಉಂಟೆಂದು."

"ಇರಬಹುದು."

"ಆಗಲಯ್ಯಾ! ತುಂಬಾ ಸಂತೋಷ" ಎಂದು ಹೇಳಿ, ಲಿಂಗಣ್ಣ ಅವನಿಗೆ ಐದು ರೂಪಾಯಿ ಇನಾಮು ಕೊಟ್ಟು ಕಳುಹಿಸಿದ. ಶಾನುಭೋಗರ ಮಗ "ಅರ್ಜಿಯ ನಕಲನ್ನು ಕೊಡು" ಎಂದು ಕೇಳಿದ. ಲಿಂಗಣ್ಣ ಕೊಟ್ಟ. ಆತ ಓದಿದ. ಅದರ ಒಕ್ಕಣೆ ಈ ರೀತಿ ಇತ್ತು:—

"ಶ್ರೀಮತ್ಸಕಲಗುಣಸಂಪನ್ನ ಕೈಲಾಸವಾಸಿ ನಿತ್ಯಾನಂದ ಯೋಗಿ ಗಿರಿಜಾಪತಿ ನಾಮಾಂಕಿತ ಮಹಾಪರಮೇಶ್ವರನಿಗೆ:

ಮಹೇಶ್ವರನೇ, ನಾನೊಬ್ಬ ತೀರಾ ಬಡ ಅರ್ಚಕ. ನನ್ನ ಹೊಟ್ಟೆಗೆ ಸಂಪಾದನೆಯಿಲ್ಲ. ಪರರಿಂದ ನಿಂದೆ ಹೆಚ್ಚಾಗಿದೆ. ಅಲ್ಪನಾದ ನಾನು ತಮ್ಮಂತಹ ಸರ್ವಜ್ಞನಿಗೆ ಹೇಳುವುದು ತಾನೇ ಏನಿದೆ? ಸದ್ಯಕ್ಕೆ ನೂರು ರೂಪಾಯಿಗಳನ್ನಾದರೂ ಕಳುಹಿಸಬೇಕು.

ತಮ್ಮ ಚರಣಾರವಿಂದಗಳಲ್ಲಿ ಅನಂತಾನಂತ ಪ್ರಣಾಮಗಳು.

ತಮ್ಮ ಪಾದಸೇವಕ,

(ಸಹಿ) ಲಿಂಗಣ್ಣ."

ಇದನ್ನು ಓದಿ ಶಾನುಭೋಗರ ಮಗ ಹುಸಿನಗು ನಗುತ್ತಾ "ಲಿಂಗಣ್ಣಾ ಈ ಪತ್ರ ರಾಜನಿಗೆ ಹೋಗಿ, ಅಲ್ಲಿಂದ ದೇವರಿಗೆ ಹೋಗಿರಬಹದು. ದೇವರು ಕಳುಹಿಸಿದ ನೂರು ರೂಪಾಯಿನಲ್ಲಿ ರಾಜನು ನಿನಗೆ ಐವತ್ತು ರೂಪಾಯಿ ಕಳುಹಿಸಿದ್ದಾನೆ. ಇನ್ನು ಐವತ್ತು ರೂಪಾಯಿ ಮಾಯವಾಗಿದೆ. ಈಗೊಂದು ಉಪಾಯ ಮಾಡು. ಮತ್ತೊಂದು ಕಾಗದವನ್ನು ಈ ರೀತಿ ಬರಿ" ಎಂದು ತಾನೊಂದು ಕಾಗದವನ್ನು ಬರೆದುಕೊಟ್ಟನು. ಅದರ ರೀತಿ ಹೀಗೆ:

"ಮಹೇಶ್ವರನಿಗೆ,

ತಮ್ಮ ಹಣ ಕೇವಲ ಐವತ್ತು ರೂಪಾಯಿ ತಲುಪಿತು. ಅದಕ್ಕಾಗಿ ನಾನು ಚಿರಋಣಿ. ಇನ್ನು ಐವತ್ತು ರೂಪಾಯಿಯನ್ನು ರಾಜನೇ ತೆಗೆದುಕೊಂಡುಬಿಟ್ಟಿದ್ದಾನೆ. ದಯವಿಟ್ಟು ವಿಚಾರಿಸಬೇಕು. ಇಷ್ಟೇ ತಮ್ಮಲ್ಲಿ ವಿನಂತಿ.

ತಮ್ಮ ಚರಣಾರವಿಂದಗಳ ಸೇವಕ,

ಲಿಂಗಣ್ಣ."

ಈ ಕಾಗದವನ್ನು ಹಿಂದೆ ಮಾಡಿದಂತೆ, ರವಾನೆ ಮಾಡಿಉ ಬೆಂಗಳೂರಿಗೆ ಬಂದು, ಅಂಚೆಯ ಕಛೇರಿಗೆ ಹೋದ. ಆಗ ಅಂಚೆ ಅಧಿಕಾರಿ ಬಂದು,

"ಲಿಂಗಣ್ಣ, ರಾಜನಿಂದ ಐವತ್ತು ರೂಪಾಯಿ ಬಂತಲ್ರೀ. ನೀವೇ ಪುಣ್ಯಾತ್ಮರು" ಎಂದರು.

ಲಿಂಗಣ್ಣ, ಕುತೂಹಲದಿಂದ "ಏನು ರಾಜನೇ?" ಎಂದ.

"ಹೌದು, ರಾಜನೇ."

"ರಾಜ ಏಕೆ ಕಳುಹಿಸಿದ?"

"ನಾವು ರಾಜನಿಗೆ ನಿನ್ನ ವಿಚಿತ್ರ ಅರ್ಜಿಯನ್ನು ಕಳುಹಿಸಿದ್ದೆವು. ಅದನ್ನು ನೋಡಿ ರಾಜನು ಮರುಕಗೊಂಡು ಐವತ್ತು ರೂಪಾಯಿ ಕಳುಹಿಸಿರಬಹುದು."

"ದೇವರಿಂದ ನೂರು ರೂಪಾಯಿ ಬಂದು, ರಾಜ ಐವತ್ತು ರೂಪಾಯಿ ಇಟ್ಟುಕೊಂಡು, ಉಳಿದ ಐವತ್ತು ರೂಪಾಯಿ ನಮಗೆ ಕಳುಹಿಸಿದ್ದಾನೆ ಅಲ್ಲವೆ?"

"ಅಯ್ಯೋ ಹುಚ್ಚ, ಅಲ್ಲವಯ್ಯ."

"ಹೋಗ್ರಿ, ನಿಮಗೇನು ಗೊತ್ತು? ದೇವರ ಕೆಲಸವೇ ಇದು" ಎಂಬುದಾಗಿ ಲಿಂಗಣ್ಣ ಸಾಧಿಸತೊಡಗಿದ. ಕಡೆಗೆ ಕಾಗದವನ್ನು ಹಿಂದಿನಂತೆ ಮುಫತ್ತಾಗಿ ರವಾನಿಸುವುದಾಗಿ ಹೇಳಿ ಕಳುಹಿಸಿದರು. ಲಿಂಗಣ್ಣ ಬಂದುಬಿಟ್ಟ.

ಆ ಕಾಗದ ರಾಜನಿಗೆ ಸೇರಿತು. ಅವನು ನಕ್ಕು ಲಿಂಗಣ್ಣನ ದೈವ ಭಕ್ತಿಗೆ ಮೆಚ್ಚಿ, ತನ್ನ ಮೇಲೆ ಕೋಪಬಂದರೂ ಚಿಂತೆಯಿಲ್ಲವೆಂದು ಹೇಳಿ, ದೇವಸ್ಥಾನಕ್ಕೆ ಬಂದುಬಿಟ್ಟ.

ರಾಜನು ಬಂದುದನ್ನು ಕೇಳಿ ಎಲ್ಲರೂ ಆಶ್ಚರ್ಯಚಕಿತರಾದರು. ನಿಜಸ್ಥಿತಿಯನ್ನರಿತ ಮೇಲೆ ಲಿಂಗಣ್ಣ ರಾಜನ ಕ್ಷಮೆಬೇಡಿದ. ರಾಜನು ಸಂತೋಷಪಟ್ಟು ಜಗಳವನ್ನು ತೀರ್ಮಾನ ಮಾಡಿ, ಹೊರಟುಹೋದ. ಅಂದಿನಿಂದ ಲಿಂಗಣ್ಣನ ಮಹಿಮೆ ಎಲ್ಲೆಲ್ಲೂ ಹರಡಿತು.



# ಶೇಕದಾರರ ಮೊಕ್ಕಾಂ

———::———

"ಬುದ್ದಿ, ಸಣಕಲಹಳ್ಳಿ ಸೊಣ್ಣಪ್ಪ ಬಂದವ್ನೆ" ಎಂದ, ಖಾದರ್ ಸಾಬಿ ಶೇಕ್‌ದಾರರ ಸಂಗಡ. "ಬರಲಿ" ಅಂದರು ಶೇಕ್‌ದಾರ್ರು. ಸೊಣ್ಣಪ್ಪ ಒಂದು ಕೈಯಲ್ಲಿ ಕುಂಬಳಕಾಯಿ, ಇನ್ನೊಂದು ಕೈಯಲ್ಲಿ ಕಾಗದದ ಕಂತೆ ಇಟ್ಟುಕೊಂಡು ಒಳಕ್ಕೆ ಹೊರಟ; ನಮಸ್ಕಾರ ಮೊದಲಾದುವೆಲ್ಲ ನಡೆಯಿತು.

ಶೇಕ್‌ದಾರ್ರು ಕೇಳಿದರು: "ಏನು ಸಮಾಚಾರ" ಎಂದು. ಪಟೇಲ ಉತ್ತರ ಕೊಟ್ಟ. "ಸ್ವಾಮಿ, ವಸೂಲಿಯೇನೊ - ಹಾಗೂ ಹೀಗೂ ಐತೆ. ನಮ್ಮೂರಿನಲ್ಲಿ ತಕರಾರುಗಳು ಬಹಳ ಇವೆ. ಕಂದಾಯ ಕೇಳಿದರೆ ಕೊಡೋದಿಲ್ಲ. ನೋಟೀಸ್ ಕೊಟ್ಟರೆ ನನ್ನನ್ನೇ ಬೈತಾರೆ. ಒಬ್ಬನ ಹೊಲ ಹರಾಜಾಗಬೇಕಾಗಿದೆ. ಬಲು ಗಲಾಟೆ, ನನ್ನ ಕೊಂದು ಬಿಡೋ ಹಾಗೈತೆ ಏರ್ಪಾಟು. ತಾವು ದಯವಿಟ್ಟು ಬರಬೇಕು. ನಮ್ಮೂರಿನಲ್ಲಿ ಎರಡು ಪಾರ್ಟಿ. ಅದಕ್ಕೇ ಇಷ್ಟು ಕಷ್ಟ" ಎಂದು ತನ್ನ ಚಿಕ್ಕ ಪುರಾಣ ಮುಗಿಸಿದ. ಶೇಕದಾರ್ರು "ಯಾರೋ ಅವನು? ಬರ್‍ತೀನಿ ತಾಳು: ನಾಳೆ ಬೆಳಗಾಗೋ ಹೊತ್ತಿಗೆ ದಸ್ತಗಿರಿ ಮಾಡಿಬಿಡುತ್ತೇನೆ." ಎಂದು ಹೇಳುತ್ತಿರುವಷ್ಟರಲ್ಲಿ ಸೊಣ್ಣಪ್ಪ ಬಾಯಿ ಹಾಕಿ "ಅಷ್ಟು ಮಾತ್ರ ಮಾಡಿದರೆ" ಎಂದು ಗೊಣಗಿದ.

ಅನಂತರ ಅವನು ಕುಂಬಳಕಾಯಿ ಕೆಳಗಿಟ್ಟಿದ್ದನ್ನು ಕಂಡು, "ಸಣ್ಣಪ್ಪಾ, ಕುಂಬಳಕಾಯಿ ಒಂದೇನೇ? ಮೆಣಸಿನಕಾಯಿ, ಕಳ್ಳಿಕಾಯಿ, ಹುರುಳೀಕಾಯಿ ಇಲ್ಲವೇನಯ್ಯಾ? ನೀನು ಯಾವಾಗ ಬಂದರೂ ಬರೀ ಕೈಯಲ್ಲೇ ಬರೋದು" ಎಂದು ಶೇಕದಾರ್ರ ಮಗಳು ಟೀಕೆ ಮಾಡಿದಳು. ಶೇಕದಾರ್ರು "ನೋಡಿದೇನಯ್ಯಾ! ನಮ್ಮ ಮಗು ಏನು ಹೇಳ್ತಾಳೆ" ಎಂದು ಜಂಭ ಕೊಚ್ಚಿಕೊಂಡರು.

ಸಣಕಲಹಳ್ಳಿ ಸೊಣ್ಣಪ್ಪ ಎದ್ದು ನಿಂತು, "ಸ್ವಾಮಿಾ, ಬರ್ತ್ತೀನಿ. ತಾವು ಖಂಡಿತ ನಾಳೆ ದಯಮಾಡಿಸಬೇಕು. ತಕರಾರು ಫೈಸಲ್ ಮಾಡಬೇಕು. ಪಾರ್ಟಿಯವರು ಸಾಹೇಬರಿಗೆ ಅರ್ಜಿ ಗುಜರಾಯಿಸಿ ಕೊಂಡಿರಬಹುದು. ಏನಾದರೂ ಆಗಲಿ ನಾಳೆ......." ಎನ್ನುತ್ತಾ ಬೀದಿಯಲ್ಲಿ ಹೊರಟ. ಶೇಕದಾರ್ರು 'ಹೂ' ಎಂದುಕೊಂಡು ಒಳಕ್ಕೆ ಸ್ನಾನಕ್ಕಾಗಿ ಹೊರಟರು.

ಮಾರನೆಯ ದಿನ ಶೇಕದಾರ್ರು ಸೂಟು, ಬೂಟ್ಸು, ಕಂಬಿ ಇಲ್ಲದ ರುಮಾಲು - ಮುಂತಾದ ಉಡುಪನ್ನು ಧರಿಸಿ, ತಮ್ಮ ಆಪ್ತ ಜವಾನನೊಡನೆ ಪ್ರಯಾಣಸನ್ನದ್ಧರಾದರು.

ಶೇಕದಾರ್ರು ಮುಂದೆ, ಅವರ ಜವಾನ ಹಿಂದೆ. ಇಬ್ಬರಿಗೂ ಸೈಕಲ್‌ಗಳೇ ವಾಹನಗಳು. ಸ್ವಲ್ಪದೂರ ಹೋದ ಮೇಲೆ ಸೈಕಲ್ ಕೆಲಸ ಕೊಟ್ಟೇ ಕೊಟ್ಟಿತು. ಶೇಕದಾರ್ರ ಸೈಕಲ್ಲೇ ಕೆಟ್ಟುಹೋಗಬೇಕೇ? ಮುಂದಿನ ಚಕ್ರ ಪಂಕ್ಚರ್ ಆಗಿತ್ತು. ರಿಪೇರಿ ಮಾಡಲು ಸಾಮಾನಿಲ್ಲ. ಟೈರ್ ತೆಗೆಯಬೇಕಾದರೆ ಎರಡು ಬಿದಿರು ದಬ್ಬೆಗಳು. ಹಾಗೂ ಹೀಗೊ ಟ್ಯೂಬನ್ನು ಹೊರಕ್ಕೆ ತೆಗೆದರು. ಪಂಪು ಬೇರೆ ಇಲ್ಲ. ಬಾಯಿಯಲ್ಲೇ ಊದಿದರು. ಪಂಕ್ಚರನ್ನು ಹುಡುಕತೊಡಗಿದರು. ಪತ್ತೆಮಾಡುವುದು ಬಹಳ ಕಷ್ಟವಾಯಿತು. ಕಡೆಗೆ ಒಂದು ಉಪಾಯ ಹೊಳೆಯಿತು. ನುಣು ಪಾದ ಮಣ್ಣನ್ನು ತೆಗೆದುಕೊಂಡು ಟ್ಯೂಬಿನ ಸುತ್ತಾ ಇಟ್ಟರು. ಎಲ್ಲಿ ಅಲುಗಾಡುತ್ತಿತ್ತೋ ಅಲ್ಲಿಯೇ ಪಂಕ್ಚರ್ ಆಗಿದೆಯೆಂದು ತೀರ್ಮಾನಿಸಿ, ಯೋಚಿಸುತ್ತಾ ಕುಳಿತರು. ಪ್ಯಾಚ್ ಹಾಕಲು ರಬ್ಬರ್ ಸಹಾ ಇರಲಿಲ್ಲ. ಇನ್ನು ಸೆಲ್ಯೂಷನ್ ಎಲ್ಲಿ ಬರಬೇಕು? ಆಗ ಶೇಕದಾರ್ರ ಜವಾನ ಬುದ್ಧಿ ಉಪಯೋಗಿಸಿ, ಟ್ಯೂಬಿನಲ್ಲಿ ಪಂಕ್ಚರ್ ಆಗಿದ್ದ ಎರಡುಕಡೆಗಳಲ್ಲಿಯೂ ಬಿಗಿಯಾಗಿ ದಾರ ಕಟ್ಟಿಬಿಟ್ಟನು. ಆದರೆ ಪಂಪು ಬೇರೆ ಇಲ್ಲದೆ, ನಡೆಯು ವುದೇ ಲೇಸೆಂದು ತೋರಿತು.

ಹಳ್ಳ, ದಿನ್ನೆ, ಗುಡ್ಡ, ಕೊರಕಲು ದಾಟಿಕೊಂಡು ಹೊರಟರು. ಸುಮಾರು ಹನ್ನೆರಡು ಘಂಟೆಯ ಹೊತ್ತಿಗೆ ಸಣಕಲಹಳ್ಳಿ ತಲುಪಿದರು.

ಅಲ್ಲಿಗೆ ಹೋಗುವಾಗ್ಯೆ ಸೊಣ್ಣಪ್ಪ ಗೈರುಹಾಜರು. ಗ್ರಾಮಸ್ಥರನ್ನು

ಕೇಳಿದರೆ, "ಸ್ವಾಮಿ - ಗೌಡರು ಈಸೊತ್ತೂ ಇಲ್ಲೇ ಇದ್ರು. ಯಾರೋ ಬರ್ತಾರೆ ಅಂತಾ ಇದ್ರು. ಹೊಲದಕಡೆ ಹೋಗಿರಬಹುದು" ಎಂದು ಹೇಳತೊಡಗಿದರು. ಹೊಲ, ಗದ್ದೆ, ತೋಟ ಎಲ್ಲಾ ಸುತ್ತಿದರೂ ಪತ್ತೆಯೇ ಇಲ್ಲ. ಶೇಕದಾರ್ರು ಚಾವಡಿಯಲ್ಲಿ ಕುಳಿತರು. ಅಲ್ಲಿಯೇ ಕಾದು ಕೊಂಡೇ ಇದ್ದ ತೋಟಿ ಬಂದ. ದೊಣ್ಣೆ ಹಿಡಿದು ಆಜ್ಞೆಯನ್ನು ಶಿರಸಾ ವಹಿಸಿ ಪಾಲಿಸುವುದಕ್ಕಾಗಿ ನಿಂತ. ಶ್ರೀಕದಾರರು, "ಏನೋ ! ಈ ಊರಿನಲ್ಲಿ ಯಾರಾದರೂ ಗ್ಯಾಂಗ್‌ನವರು ಇದ್ದಾರೇನೊ ?" ಎಂದು ಕೇಳಿದರು.

ಅವನು "ಯಾರೋ ಒಬ್ಬ ಇದ್ದ. ಈಗಿಲ್ಲ" ಎಂದುತ್ತರಕೊಟ್ಟ.

"ಅವನು ಕಂದಾಯ ಕೊಟ್ಟಿಲ್ಲವಂತೆ, ಕರೆದುಕೊಂಡು ಬಾ" ಎಂದಾಜ್ಞೆಯಾಯಿತು. "ಆಗಲಿ" ಎಂದು ತೋಟಿ ಹೊರಟ. ಸ್ವಲ್ಪ ಹೊತ್ತಿನ ಮೇಲೆ ಹಿಂದಿರುಗಿ ಬಂದು "ಸ್ವಾಮಿ, ಆ ಕುಳಾ ಇಲ್ಲಾ. ಎತ್ತಲಾಗೋ ಪೇಟೆಗೆ ಹೋಗವನಂತೆ" ಎಂದುಬಿಟ್ಟ.

ಶೇಕದಾರರಿಗೆ ಬೇಸರಹತ್ತಿತು. ಕಷ್ಟಪಟ್ಟು ಬಂದ ಕೆಲಸ ನಿಷ್ಫಲ ವಾಯಿತಲ್ಲಾ ಎಂದು ಯೋಚಿಸಿದರು. ಅಷ್ಟು ಹೊತ್ತಿಗೆ ಮೂರು ಘಂಟೆ ಆಯಿತು. ಶೇಕದಾರರಿಗೆ ಹಸಿವಿನ ಬಾಧೆ ಹೆಚ್ಚಾಯಿತು. ಬೆಳಗ್ಗೆ ಮಾಡಿದ್ದ ಉಪಾಹಾರ ತಾನಾಗಿಯೇ ಕರಗಿಹೋಯಿತು. ಪಟೇಲ ಬೇರೆ ಇಲ್ಲದ್ದರಿಂದ ಎಳನೀರಿಗೂ ಸೊನ್ನೆ. ಆ ಗ್ರಾಮದ ಶಾನುಭೋಗ ವಾಸ ಮಾಡುವುದು ಯಾವುದೋ ಇನ್ನೊಂದು ಹೋಬಳಿಯಲ್ಲಿ. ಗ್ರಾಮದಲ್ಲಿ ಇರುವುದು ೫೦ ಮನೆಗಳು. ಬ್ರಾಹ್ಮಣರ ಹೆಸರೇ ಇಲ್ಲ. ಪಂಚಾಯಿತಿ ಹಾಲಿನಲ್ಲಿ ದನಕರು ಕಟ್ಟುವುದು ಮಾಮೂಲು. ಪಟೇಲನು ಬಂದಾಗಲೇ ಕಂದಾಯ ವಸೂಲಿ; ಅವನ ವಾಸ ಪಕ್ಕದ ಹಳ್ಳಿಯಲ್ಲಿ. ಊರಿನಲ್ಲಿ ವಿದ್ಯೆ ಎಂಬ ಪದವೇ ಇಲ್ಲ. ಇರುವ ನೂರೈವತ್ತು ಜನರಲ್ಲಿ ನೂರುಮಂದಿ ಕೋರ್ಟು ಹಕ್ಕಿಗಳು; ಇನ್ನುಳಿದವರು ನೇಗಿಲ ಯೋಗಿಗಳು; ವರಮಾನ ಭೂಮಿತಾಯಿ ಕೊಟ್ಟರುಂಟು, ಇಲ್ಲದಿದ್ದರೆ ಏಕಾದಶಿ. ಇಂತಹ ಗ್ರಾಮ ದಲ್ಲಿ ನಮ್ಮ ಶೇಕದಾರರ ಮೊಕ್ಕಾಂ.

ಘಂಟೆ ನಾಲ್ಕಾದರೂ ಊಟವಿಲ್ಲ. ಹಿಂತಿರುಗಿ ಹೋಗೋಣ ವೆಂದರೆ ೧೩ ಮೈಲಿ ಹೋಗಬೇಕು. ಆ ಗ್ರಾಮ ಜನ್ಮತಾಳಿದಂದಿನಿಂದ

ಒಬ್ಬ ಅಮಲ್ದಾರ್ ಆಗಲೀ, ಶೇಕದಾರರಾಗಲೀ, ಯಾರೂ ದಯಮಾಡಿ ಸಿರಲಿಲ್ಲ.

ಹೀಗಿರುವಾಗ ಆ ಗ್ರಾಮಸ್ಥರಿಗೆ ಅಧಿಕಾರಿಗಳಿಗೆ ಮರ್ಯಾದೆ ಮಾಡುವುದು ಹೇಗೆತಾನೆ ಬರಬೇಕು? ಅಡಿಗೆ ಕೂಡಾ ಮಾಡಲು ಯಾರಿಗೂ ಸರಿಯಾಗಿ ಬಾರದು. ಶೇಕದಾರ್ರ ಜವಾನ ಅಲ್ಲಿ ಇಲ್ಲಿ ಸುತ್ತಾಡಿ ಹಿಟ್ಟು ಸಂಪಾದಿಸಿಕೊಂಡ. ಆದರೆ ಶೇಕದಾರರಿಗೊ?

ಸಂಜೆ ೬ ಘಂಟೆ ಹೊಡೆಯಿತು. ಶೇಕದಾರರಿಗೆ ಅಮಲೇರಿತು. ಅಷ್ಟು ಹೊತ್ತಿಗೆ ಶಾನುಭೋಗರ ಮಗ ಅಲ್ಲಿ ಅಕಸ್ಮಾತ್ ಪ್ರತ್ಯಕ್ಷನಾಗಿ ಬಿಟ್ಟ. ಸರಿ, ಶೇಕದಾರರು ಅವನನ್ನು ಹಿಡಿದುಕೊಂಡು ಅಡಿಗೆ ಪ್ರಯತ್ನ ಹಚ್ಚಿದರು.

ಊರೆಲ್ಲಾ ಸುತ್ತಿದರೂ ಅಕ್ಕಿ ಸಿಕ್ಕಲಿಲ್ಲ. ಬೇಳೆ ಮೊದಲೇ ಇಲ್ಲ. ಇನ್ನು ಮೆಣಸಿನಪುಡಿ ಎಲ್ಲಿ ಬರಬೇಕು? ಜನಜೀವನ ಹೇಗೆ ಹೇಗೋ ಇರುತ್ತದೆ. “ ರಾಗಿ ಬೀಸಿ ಹಿಟ್ಟುಮಾಡುವುದು; ಕಲ್ಲಿನಮೇಲೆ ಒಂದೆರಡು ಮೆಣಸಿನಕಾಯಿ, ಉಪ್ಪು ಹಾಕಿ ಅರೆಯುವುದು; ಅಂತಹ ಕಾರದಲ್ಲಿ ಹಿಟ್ಟನ್ನು ಅದ್ದುವುದು ನುಂಗುವುದು; ಬೇಳೆ ಏತಕ್ಕೆ? ಹುಣುಸೇಹಣ್ಣು ಏತಕ್ಕೆ? ಅನ್ನ ತಿನ್ನುವವನು ದೊಡ್ಡ ಸಾಹುಕಾರ. ಬೇಳೆಹುಳಿ ಮಾಡುವವನು ದೊಡ್ಡಮನುಷ್ಯ. ತರಕಾರಿ ಉಂಬುವವನು ಅಧಿಕಾರಿ' ಎಂಬುದೇ ಅವರ ವಾದ.

ಕಡೆಗೆ ಯಾರ ಮನೆಯಲ್ಲಿಯೋ ಇದ್ದ ಭತ್ತ ತಂದು, ಕುಟ್ಟಿ, ಅಕ್ಕಿ ಮಾಡಿ, ಅದರಿಂದ ಅನ್ನಮಾಡಿದ್ದಾಯಿತು. ಶಾನುಭೋಗರ ಮಗ ಆ ಗ್ರಾಮದ ಪದ್ಧತಿಯಂತೆ ಕಾರವನ್ನು ತಯಾರಿಸಿದ. ಇನ್ನು ಊಟಕ್ಕೆ ಎಲೆಯ ಪ್ರಶ್ನೆ. ಎಲೆಗಾಗಿ ಜವಾನ ಹೊರಟ, ಆಲದೆಲೆ ತಂದು ಹಚ್ಚಿದ್ದೂ ಆಯಿತು. ಊಟಮಾಡುವ ಹೊತ್ತಿಗೆ ಬಿರುಸಾದ ಮಳೆ ಆರಂಭ ವಾಯಿತು. ಸಂಜೆಯ ಮಳೆ. ನಿಲ್ಲುವಂತೆಯೇ ಇರಲಿಲ್ಲ. ಶೇಕದಾರರು ನಿಂತಿದ್ದ ಚಾವಡಿಯಲ್ಲಿ ನೀರು ಸುರಿಯಲು ಆರಂಭವಾಯಿತು. ಅತ್ತಿತ್ತ ಓಡಾಡತೊಡಗಿದರು. ಏನು ಮಾಡಿದರೇನು? ಆ ಗ್ರಾಮದಲ್ಲಿ ಹೆಂಚಿನ ಮನೆಗಳೇ ಇಲ್ಲ. ಎಲ್ಲಾ ಗುಡಿಸಿಲುಗಳೇ. ಶೇಕದಾರರಿಗೆ ನಿಲ್ಲಲು

ಸ್ಥಳವಿಲ್ಲದಂತಾಯಿತು. ನೆಂದ ಬಟ್ಟೆ ಬಿಟ್ಟರೆ ಬೇರೆ ಬಟ್ಟೆ ಸಿಗಲೊಲ್ಲದು. ಗ್ರಾಮವೆಲ್ಲ ಹುಡುಕಿದರೂ ಚಾಪೆ ಕೂಡ ಸಿಗಲಿಲ್ಲ. ಈ ದೃಶ್ಯವನ್ನು ನಮ್ಮ ಮಹಾತ್ಮಾಜೀಯವರು ನೋಡಿದ್ದಿದ್ದರೆ . . . . ಇನ್ನಾವ ತರಹ ಪ್ರತಿಜ್ಞೆಮಾಡುತ್ತಿದ್ದರೋ ಏನೋ ?

ಅಂತೂ ರಾತ್ರಿಯೆಲ್ಲಾ ಮಳೆ: ಮಧ್ಯೆ ಸ್ವಲ್ಪ ವಿರಾಮ. ಆಗ ಶೇಕದಾರರು ಊಟಕ್ಕೆ ಮೊದಲು ಮಾಡಿದರು. ಆ ಊಟ ಸ್ವರ್ಗ ಲೋಕದ ಭೋಜನದಂತೆ ಇತ್ತಂತೆ. ದೇವೇಂದ್ರನ ಊಟ ಎನ್ನಿಸಿತಂತೆ. ಬೆಳಗಿನಿಂದ ಹೊಟ್ಟೆಗಿಲ್ಲದೇ ಇದ್ದುದಕ್ಕೆ ಇಷ್ಟು ಪಾಡು. ೨೧ ದಿನಗಳು ಉಪವಾಸ ಹೇಗಿದ್ದನೋ ಆ ಮುದುಕ. ಶಾನುಭೋಗರ ಮಗ ಬಡಿ ಸುತ್ತಾ "ಸ್ವಾಮಿ, ಎಲ್ಲಾ ಈ ಹಾಳು ಹೊಟ್ಟೆಗೇ ಅಲ್ಲವೇ ?" ಎಂದ. ಶೇಕದಾರರು ಮತ್ತೆ ಮಾತನ್ನೇ ಆಡಲಿಲ್ಲ.

ರಾತ್ರಿ ಮಲಗಲು ನೆಲ್ಲುಹುಲ್ಲೇ ಆಧಾರವಾಗಿತ್ತು. ಪಾಪ ನಮ್ಮ ಶೇಕದಾರರ ಮೊಕ್ಕಾಂ ಹೇಗಿದೆ ನೋಡಿದಿರಾ ?

೦ ೦ ೦ ೦

ಈ ಕತೆಯನ್ನು ಕೇಳಿದಾಗ ನನಗೇನೋ ಆಶ್ಚರ್ಯವಾಯಿತು. ಆದರೆ ಹೆಚ್ಚುಗಾರಿಕೆ ಏನೂ ತೋರಲಿಲ್ಲ. ಏಕೆಂದರೆ ನಮ್ಮ ದೇಶದಲ್ಲಿ ಸಾವಿರಾರು ಗ್ರಾಮಗಳು ಹೀಗೆಯೇ ಇವೆ. ಕೆಲವನ್ನು ನಾನೇ ನೋಡಿ ದ್ದೇನೆ. ಅವುಗಳ ಪಾಡೇನು ?



# ಹುಲಿ ಷಿಕಾರಿ

———:o:———

ನಾವು ಗೇರುಸೊಪ್ಪೆ ಜಲಪಾತ ನೋಡಲು ಹೋಗಿದ್ದು, ಅಲ್ಲಿಂದ, ಹಿಂತಿರುಗಿ, ಶಿವಮೊಗ್ಗೆಗೆ ಬಸ್ಸಿನಲ್ಲಿ ಹೋಗುತ್ತಿದ್ದೆವು. ಕುಂಸಿ ಹತ್ತಿರ ಬರುವ ಹೊತ್ತಿಗೆ ಸಾಯಂಕಾಲ ಆಗಿತ್ತು. ಅದಾದರೋ ಭಯಂಕರ ಕಾಡು; ಸುತ್ತಲೂ ಮೇಘವನ್ನೇ ಮುಚ್ಚುವಂತಹ ಮರಗಳು; ಅಲ್ಲಲ್ಲಿ ಭೀಕರ ಪೊದೆಗಳು; ಎದ್ದು ಕಾಣುವ ಹಾವಿನ ಹುತ್ತಗಳು; ಡೊಂಕು ಡೊಂಕಾಗಿ ಬೆಳೆದ ಬಳ್ಳಿಗಳು; ಇರುಳು ಕತ್ತಲೆಯ ಗವಿಗಳು; ನಮಗೆ ಆ ದೃಶ್ಯ ಭಯಾನಕವಾಗಿಯೇ ಇತ್ತು.

ಅಲ್ಲಿಂದ ಇನ್ನೆರಡು ಮೈಲಿ ಹೋಗುವಷ್ಟರಲ್ಲಿ, ಒಂದು ದೊಡ್ಡ ಹುಲಿ ಒಂದು ಚಿಕ್ಕ ಕರುವನ್ನು ಗಪ್ಪನೆ ಹಿಡಿದು, ರಸ್ತೆಯ ಒಂದು ಕಡೆ ಯಿಂದ ಮತ್ತೊಂದು ಕಡೆಗೆ ಓಡಿತು. ಆದರೆ ಹುಲಿ ಅತ್ತಲಿಂದ ಓಡಿ ದುದಕ್ಕೂ ಬಸ್ ಬಂದುದಕ್ಕೂ ಸರಿಹೋಗಿ, ನಡುದಾರಿಯಲ್ಲಿ ಭಯಂಕರ ಘಟನೆ ಸಂಭವಿಸಿತು. ನಮ್ಮಲ್ಲಿ ಯಾರಿಗೇನೂ ಅಪಾಯವಾಗಲಿಲ್ಲ

ನಮ್ಮ ಬಸ್ ಡ್ರೈವರ್ ನಾರಾಯಣಸಾಮಿ ಬಹು ಗಟ್ಟಿಗ. ಅವನು ಎಲ್ಲೆಲ್ಲೊ ಪಾಡು ಬಿದ್ದು, ಈ ಡ್ರೈವರ್ ಕೆಲಸಕ್ಕೆ ಬಂದಿದ್ದ. ಅವನಿಗೆ ಇಂಗ್ಲಿಷ್ ಲೋವರ್ ಸೆಕೆಂಡರೀ ಪರೀಕ್ಷೆ ಕೂಡ ಆಗಿತ್ತು. ಅವನು ಮೈಸೂರು ಸಂಸ್ಥಾನವನ್ನೆಲ್ಲಾ ನಾಲ್ಕು ಸುತ್ತು ಹೊಡೆದಿದ್ದ. ಅಲ್ಲದೆ ಅವನು ಅನೇಕ ಅಧಿಕಾರಿಗಳ ಹತ್ತಿರ ಕಾರ್ ಡ್ರೈವರ್ ಆಗಿದ್ದ. ಸ್ವಲ್ಪ ದಿನಗಳು ಸಾಹುಕಾರಿ ಕಂಪೆನಿಗಳ ಮೋಟಾರುಗಳಲ್ಲಿಯೂ ಕೆಲಸ ಮಾಡಿದ್ದ. ಇದರಿಂದ ಅವನಿಗಂತೂ ಬಹಳ ಕೆಚ್ಚಿದೆ. ಇನ್ನೂ ಮದುವೆ ಸಹ ಆಗಿರಲಿಲ್ಲ. ಅವನಿಗೆ ವಯಸ್ಸು ಸುಮಾರು ೩೦ ಆಗಿತ್ತು. ಕಾಡು ಗಳಲ್ಲಿ ಬೇಟೆಯಾಡುವುದೆಂದರೆ ಅವನಿಗೆ ಪ್ರಾಣ. ಆದರೆ ಬಸ್ಸನ್ನು ಬಿಟ್ಟು

ಅವನು ಹೇಗೆ ತಾನೇ ಬೇಟೆಯಾಡಬಲ್ಲ? ಆ ದಿನ ಗಟ್ಟಿ ಮನಸ್ಸು ಮಾಡಿ, ಆ ಹುಲಿಯ ಮೇಲೆ ಬಿಟ್ಟೇಬಿಟ್ಟ. ಅದರಲ್ಲೂ ಬಹಳ ಜಾಣತನ ಉಪಯೋಗಿಸಿದ್ದ. ದೂರದಲ್ಲೇ ಹುಲಿ ಕಂಡಾಗ, ಆ ಹುಲಿ ರಸ್ತೆಗೆ ತಿರುಗವಷ್ಟರಲ್ಲಿ ಬಸ್ ವೇಗ ಹೆಚ್ಚಿಸಿ, ಅದರ ಮೇಲೆ ಬಿಟ್ಟೇಬಿಟ್ಟ. ಆದರೆ ಆ ಹುಲಿಗೆ ಬಸ್ಸಿನ ಆರ್ಭಟ ಕೇಳಿಸಲಿಲ್ಲವೇ? ನಾವೆಲ್ಲಾ ಇಳಿದೆವು. ಕರುವನ್ನು ಬಿಟ್ಟು ಹುಲಿ ಹೊರಳಿತು. ಕರು ಏಳಲಾರದೇ ಹೋಯಿತು. ಹುಲಿ ಮಾತ್ರ ಎದ್ದುಹೋಗುವಷ್ಟರಲ್ಲಿ, ಡ್ರೈವರ್ ನಾರಾಯಣಸ್ವಾಮಿ ಏನೇನೋ ಸಾಹಸ ಮಾಡಿ ಅದರ ಪ್ರಾಣ ತೆಗೆದೇಬಿಟ್ಟ. ಹೆಂಗಸರಂತೂ ಹುಲಿಯನ್ನು ಕಂಡು ಹೆದರಿಬಿಟ್ಟರು. ಮಕ್ಕಳಂತೂ ಅತ್ತೇಬಿಟ್ಟರು ಅಷ್ಟರಲ್ಲಿ ಕರುವೂ ಸಹ ಸತ್ತುಹೋಯಿತು. "ಡ್ರೈವರ್ ಹುಲಿಗೆ ಪೆಟ್ರೋಲ್ ಹುಯ್ದು, ಅದು ಬಿದ್ದಕೂಡಲೇ ಕೈಕಾಲುಗಳನ್ನು ಬಿಗಿದು ಕಟ್ಟಿದ್ದು; ಕಂಡಕ್ಟರ್ ಹನುಮಂತಪ್ಪ ಆ ಹುಲಿಗೆ ಗಾಬರಿ ಇಟ್ಟದ್ದು; ನಾವೆಲ್ಲಾ ಸುತ್ತಲೂ ಕಾವಲಿದ್ದು ನಿಂತಿದ್ದು." ಇವುಗಳನ್ನೆಲ್ಲಾ ನೆನಸಿಕೊಂಡರೆ ಮೈ 'ಜುಂ' ಎನ್ನಿಸುತ್ತದೆ.

ಹೀಗಾಗಿ, ಬಸ್ ಮೇಲೆ ಹುಲಿ ಹಾಕಿಕೊಂಡು ಹೊರಡುವಾಗೆ ರಾತ್ರಿಯಾಗಿತ್ತು. ಕತ್ತಲಂತೂ ಗಭೋ ಎನ್ನುತ್ತಿತ್ತು. ಊರುಸೇರುವ ಹೊತ್ತಿಗೆ ರಾತ್ರಿ ಒಂದಾಗಿತ್ತು.

ಸುಮಾರು ಒಂದು ತಿಂಗಳು ಕಳೆದ ಮೇಲೆ ನಾನು ಯಾವುದೋ ಒಂದು ಕೆಲಸಕ್ಕಾಗಿ ಸಾಗರಕ್ಕೆ ಹೋಗಿದ್ದೆ. ಅಲ್ಲಿಂದ ಮತ್ತೂರು ಫಾರಂಗೆ ಹೋಗಬೇಕಾಗಿತ್ತು: ಸರಿ. ಇದೇ ಬಸ್ಸಿಗೆ ಬಂದೆ.

ಡ್ರೈವರು "ಬನ್ನಿ ಸಾರ್" ಎಂದು ಸಂತೋಷದಿಂದ ಹೇಳಿದ. ನಾನಂತೂ ಅವನ ಮುಖ ನೋಡಿ ಸಂತಸಗೊಂಡು ಬಸ್ ಹತ್ತಿದೆ. ನನಗೆ ಅವನ ಸಂಗತಿಯನ್ನು ತಿಳಿಯಬೇಕೆಂಬ ಕುತೂಹಲವಿತ್ತಾದ್ದರಿಂದ, ಅವನನ್ನು ಮೆಲ್ಲನೆ ಕೇಳಿದೆ. . . . . "ಆವತ್ತು ಹುಲಿ ಕೊಂದೆಯಲ್ಲಾ - ಆಮೇಲೇನಾಯಿತು?"

ಅವನು ಹೇಳಿದ, "ಈಗ ಹೇಳೋಕೆ ಸಮಯಾ ಅಲ್ಲ. ಅದು ಭಾರೀ ಕತೆ. ಸಾಗರದಲ್ಲಿ ಹೇಳ್ತೀನಿ".

"ಇರಲಿ ಹೇಳು, ಸೂಕ್ಷ್ಮವಾಗಿ" ಎಂದೆ. ಅಷ್ಟರಲ್ಲಿ ಬಸ್‌ನಲ್ಲಿ ನನ್ನ ಹಿಂದೆ ಕುಳಿತಿದ್ದವರೊಬ್ಬರು, (ನಾನು ಮುಂದಿನ ಸೀಟಿನಲ್ಲಿ ಕುಳಿತಿದ್ದೆ) "ಸೂಕ್ಷ್ಮ ಎಂತದ್ದು ಸಾರ್? ಹುಲಿ ಕೊಂದ ದೆಶೆ ಬಹಳ ಒಳ್ಳೇದು. ಭರ್ಜರಿ ಮದುವೇನೂ ಆಯಿತು; ಒಳ್ಳೆ ಇನಾಮೂ ಬಂತು" ಎಂದರು. ನಾನು ಈ ಮಾತನ್ನು ಕೇಳಿ ತಬ್ಬಿಬ್ಬಾದೆ; ಹೇಳಿದವರನ್ನು ಕೇಳಿದೆ: "ಇನಾಂ ಯಾರು ಕೊಟ್ಟರು? ಮದುವೇನೇ ಇನಾಮೇನು?"

ಅವರು ಹೇಳಿದರು: "ಅಲ್ಲ ರಾಯರೇ, ಅದರ ಸಮಾಚಾರ ನಿಮಗೆ ಗೊತ್ತಿಲ್ಲವೇನು?"

"ಇಲ್ಲವಲ್ಲಾ"

"ಏನೋ ಅವನನ್ನೇ ಕೇಳಿ - ಅವನು ಮೊದಲೊಬ್ಬ ಹುಡುಗೀ ಕೂಡಾ ಪಣ ಕಟ್ಟಿದ್ದ: "ಹುಲಿ ಕೊಂದ ಪಕ್ಷಕ್ಕೆ ನಿನ್ನ ಮದುವೆ ಆಗ್ತೀನಿ" ಅಂತ ಅವಳು ಹೇಳಿದ್ದಳಂತೆ. ಅದಕ್ಕವನು "ಖಂಡಿತಾ-ಕೊಲ್ಲೇಕೋಲ್ತೀನಿ: ಆಗ ನೀನು -" ಎಂದು ಹೇಳಿದ್ದನಂತೆ. ಸರಿ, ಈಗ ಹುಲಿ ಹೊಡೆದಿದ್ದಕ್ಕೆ ಅವಳೂ ಒಪ್ಪಿಕೊಂಡಳು: ಮದುವೇನೂ ಆಯಿತು. ಅದು ಹೇಗೆ ಅವರಿಬ್ಬರಿಗೂ ಸ್ನೇಹವಿತ್ತೊ ನಾಕಾಣೆ" ಎಂದು ಡ್ರೈವರಿಗೆ ಕೇಳಿಸದ ಹಾಗೆ ನನ್ನೊಡನೆ ಹೇಳಿದ. ಇದನ್ನು ಕೇಳಿ, ನನಗಂತೂ ಸಂಶಯ ಹೆಚ್ಚಾಯಿತು.

ಪ್ರಯಾಣಿಕರನ್ನು ನಾನು ಕೇಳುವುದಕ್ಕೆ ಅವಕಾಶವೇ ಇರಲಿಲ್ಲ. ಏಕೆಂದರೆ ನಾನು ಫ್ರಂಟ್ ಸೀಟಿನಲ್ಲಿ ಒಬ್ಬ ಅಧಿಕಾರಿಯೊಡನೆ ಕುಳಿತಿದ್ದೆ. ನನ್ನ ಹಿಂದಿನ ಸೀಟಿನಲ್ಲಿದ್ದ ಒಬ್ಬ ಜವಳಿ ವ್ಯಾಪಾರಿ ಮಾತ್ರ ಅಷ್ಟನ್ನು ತಿಳಿಸಿದ್ದ. ಅವನನ್ನೇ ಮತ್ತೆ ಕೇಳಿದೆ:—"ಅವನೇಕೆ ಪಣಕಟ್ಟಿದ?" ಎಂದು. ಆತನು ಧೋರಣೆಯಿಂದ— "ಹೆಚ್ಚಿಗೆ ನನಗೆ ಗೊತ್ತಿಲ್ಲ; ಅವನನ್ನೇ ಕೇಳಿ ಬೇಕಾದ್ರೆ" ಎಂದು ಒಂದೇ ಮಾತಿನಲ್ಲಿ ಹೇಳಿಬಿಟ್ಟ.

ನನಗೆ ಸಮಾಧಾನ ಆಗಲಿಲ್ಲ. ಡ್ರೈವರು ನನಗೆ ಚೆನ್ನಾಗಿ ಪರಿಚಯವಿತ್ತಾದ ಕಾರಣ ಅವನನ್ನು ಸಲಿಗೆಯಿಂದಲೇ ಮತ್ತೊಮ್ಮೆ ಕೇಳಿದೆ. ಅವನು "ಸಾಗರದಲ್ಲಿ ಹೇಳ್ತೀನಿ - ಈಗ ಸಾಧ್ಯವಿಲ್ಲ" ಎಂದ. ಸಾಗರ ಸಿಗುವ ವರೆಗೆ ನನ್ನೊಡನೆ ಇದ್ದ ಅಧಿಕಾರಿಯೊಂದಿಗೆ ಯುದ್ಧದ ವಿಷಯ,

ಈಗಿನ ನಾಗರಿಕತೆ, ವರ್ತಮಾನ ಪತ್ರಿಕೆಗಳ ವಿಷಯ ಮುಂತಾದುವನ್ನು ಚರ್ಚೆಮಾಡುತ್ತಾ ಕಾಲಕಳೆದೆ. ಅಷ್ಟು ಹೊತ್ತಿಗೆ ಸಾಗರ ಸಿಕ್ಕಿತು.

ಡ್ರೈವರು ಬಸ್ ಸ್ಟ್ಯಾಂಡಿನಿಂದ ಮೋಟಾರು ಷೆಡ್ಡಿಗೆ ಹೊರಟ. ಅವನೊಡನೆ ನಾನೂ ಇದ್ದೆ. ಅಲ್ಲಿಂದ ಅವನ ರೂಮಿನ ಕಡೆ ಹೊರಟೆವು. ದಾರಿಯಲ್ಲೇ ಅವನಿಗಿಷ್ಟು ಕಾಫಿ ಕೊಡಿಸೋಣ ಅಂತ ಅಲ್ಲೇ ಇದ್ದ ಹೋಟಿಲಿಗೆ ಕರೆದುಕೊಂಡು ಹೋದೆ. ಕಾಫಿ ಕುಡಿದಮೇಲೆ ಅವನನ್ನು ನಿಧಾನವಾಗಿ ಕೇಳಿದೆ:—“ ಹೇಳಯ್ಯಾ - ಆಮೇಲೇನಾಯಿತು ? ”

“ ಅವರ್‍ಯಾರೋ ನಿಮಗೆ ಹೇಳಿದರಲ್ಲಾ.”

“ ಸರಿ, ಸರಿ, ಸರಿಯಾಗಿ ಅರ್ಥವೇ ಆಗಲಿಲ್ಲ.”

“ ನಾನೂ ಹೇಳೋದು ಅಷ್ಟೆ. ಇನ್ನೇನಿದೆ ಹೇಳಿ.”

“ ಹೋಗಲಿ, ಇನಾಮು ಬಂತಂತಲ್ಲಾ ಅದು ಹೇಗೆ ? ”

“ ಓಹೋ ! ಅದರ ಸಮಾಚಾರ ಹೇಳ್ತೀನಿ, ಫಸ್ಟ್ ಕ್ಲಾಸ್ ಸರ್ಟಿಫಿಕೇಟ್ ಕೊಟ್ಟಿದಾರೆ. ಕೇಳಿ ಸ್ವಲ್ಪ - ರೂಮಿನಲ್ಲಿ ಹೇಳ್ತೀನೆ.”

“ ಅದಕ್ಕೆ ನನಗೇನು ಇನಾಮು ?”

“ ನಿಮಗೆ ಇರಲಿ, ಆಮೇಲೆ ಹೇಳ್ತೀನೆ ಯೋಚನೆ ಮಾಡಿ” ಎನ್ನುತ್ತಾ ಹೋಟೆಲಿನಿಂದ ಹೊರಕ್ಕೆ ಹೊರಟ. ನಾನು ಅವನ ಹಿಂದೆಯೇ ಹೊರಟೆ. ಅವನದೊಂದು ರೂಮು: ಅದರಲ್ಲಿ ಎರಡೇ ಕುರ್ಚಿಗಳು. ಅಸ್ತವ್ಯಸ್ತವಾದ ಸಾಮಾನುಗಳು. ಅವನೊಂದು ಕುರ್ಚಿಯ ಮೇಲೆ, ನಾನೊಂದು ಕುರ್ಚಿಯಮೇಲೆ ಕುಳಿತಾಯಿತು. ನಾನು ಈ ಸಲ ಅವನನ್ನು ಕೇಳಲೇ ಇಲ್ಲ. ಅವನೇ ಅತ್ಯಾನಂದಭರಿತನಾಗಿ ಹೇಳ ತೊಡಗಿದ:—

“ ನಾನು ಆವತ್ತು ಹುಲಿ ತಕ್ಕೊಂಡು ಸೀದಾ ಡೆಪ್ಯುಟಿ ಕಮಿಷನರ್ ಮನೆಗೆ ಹೊರಟೆ. ಆಗ ಬೆಳಿಗ್ಗೆ ಹೊತ್ತಾಗಿದ್ದುದರಿಂದ ಸಾಹೇಬರು ಮನೆಯಲ್ಲೇ ಇದ್ದರು. ಆಳಿನ ಕೈಲಿ ನನ್ನ ಸಮಾಚಾರ ಹೇಳಿಕಳುಹಿಸಿದೆ. ಅವರು ‘ ಹುಲಿ ’ ಅಂತ ಕೇಳಿದ ಕೂಡ್ಲೆ ಈಚೆಗೆ ಬಂದರು. ಬಂದವರೇ ಹುಲೀನ್ನ ನೋಡಿ “ಒಳ್ಳೆ ಭಾರಿ ಹುಲಿ : ನೀನೇ ಹೊಡೆದೇನಯ್ಯಾ ?” ಅಂದರು. ನಾನು “ ಹೌದು ಸರ್ ” ಎಂದು ಒಂದೇ ಮಾತಿನಲ್ಲಿ

ಜವಾಬು ಕೊಟ್ಟೆ. ಅವರು "ನಿನ್ನ ಹೆಸರೇನು? ಯಾವಾಗ ಹೊಡೆದೆ?" ಎಂದು ಕೇಳಿದರು. ನಾನು ನಡೆದ ಸಂಗತಿಯನ್ನೆಲ್ಲಾ ವಿವರಿಸಿದೆ. ಅವರು ಸಂತೋಷಗೊಂಡು "ಆ ಹುಲಿ ಇಲ್ಲೇ ಇರಲಿ. ಅಲ್ಲೇ ಸ್ವಲ್ಪ ಕಾದಿರು" ಎಂದು ತಿಳಿಸಿ ಅವರು ಒಳಕ್ಕೆ ಹೋದರು. ನಾನು ಅವರು ಪುನಃ ಬರುವ ವರೆಗೂ ಅಲ್ಲೆ ಅವರ ಮನೆ ಅಂಗಳದಲ್ಲಿ ಕಾದಿದ್ದೆ. ನಮ್ಮ ಸಾಹೇಬರು ಬಹಳ ಒಳ್ಳೆಯವರು; ಅವರು ಸರ್ಕಾರದ ಕೆಲಸದಲ್ಲಿದ್ದರೂ ಕೂಡ, ಅವರಿಗೆ ಜನ ಕಂಡರೆ ತುಂಬಾ ವಿಶ್ವಾಸ. ಅಂತೂ ಬಹಳ ಹೊತ್ತು ಕಾದೆ. ಆಮೇಲೆ ಬಂದರು. ಆಳು ಒಳಕ್ಕೆ ಕರೆದ. ವರಂಡಾಕ್ಕೆ ಹೋಗಿ ನಿಂತುಕೊಂಡೆ. ಅವರು ಡ್ರೆಸ್ ಹಾಕಿಕೊಂಡು ಕೊಠಡಿಯಲ್ಲಿ ಕುಳಿತುಕೊಂಡೇ ಕೇಳಿದರು. "ಏನು ಬೇಕು ನಿನಗೆ?"

"ನನಗೇನೂ ಬೇಡಾ ಸಾರ್. ತಮ್ಮ ದಯಾ ಇದ್ದರೆ ಸಾಕು. ಒಂದು ಕಾಗದ ಬರೆದುಕೊಡೀ ಸಾರ್. ಸಾಕು ಅಷ್ಟೆ" ಎಂದೆ. ಅವರು "ಆಮೇಲೆ ಬಾ ಸರ್ಟಿಫಿಕೇಟ್ ಕೊಡುತ್ತೇನೆ" ಎಂದು ಹೇಳಿ ಖರ್ಚಿಗೆ ಐದು ರೂಪಾಯಿ ಕೊಟ್ಟರು. ನಾನು ಅಲ್ಲಿಂದ ನಮಸ್ಕಾರ ಮಾಡಿ ಹೊರಟುಬಿಟ್ಟೆ.

ನನಗೆ ಸ್ವಲ್ಪ ಸಂತೋಷವಾದರೂ ಉಭಯಸಂಕಟಕ್ಕೆ ಸಿಕ್ಕಿಕೊಂಡ ಹಾಗಾಯಿತು. ಇತ್ತ ಊರಿಗೆ ಹೋಗುವಂತಿಲ್ಲ; ಅತ್ತ ಸರ್ಟಿಫಿಕೇಟ್ ಬಿಡುವಂತಿಲ್ಲ. ಸರಿ, ಹಾಗೂ ಹೀಗೂ ಕಾಲ ಕಳೆದೆ. ಬಸ್ ಸ್ಟ್ಯಾಂಡಿಗೆ ಹೋದೆ. ಅಲ್ಲಿ ಎಲ್ಲಾ ನನ್ನ ಹೊಗಳುವವರೆ. ಸಾಯಂಕಾಲದ ತನಕ ಅಲ್ಲಿ ಇಲ್ಲಿ ಅಲೆದಾಡಿ, ಕೆಲಸಕ್ಕೆ ರಜಾ ತೆಗೆದುಕೊಂಡಿದ್ದೆ ಅಂತ ಇಟ್ಟುಕೊಳ್ಳಿ. ಆಮೇಲೆ ಸಾಹೇಬರ ಮನೆಗೆ ಹೋದೆ. ಸಾಹೇಬರು ಇನ್ನೂ ಬಂದಿರಲಿಲ್ಲ. ಸ್ವಲ್ಪ ಕಾದೆ. ಆಮೇಲೆ ಬಂದರು. ನಮಸ್ಕಾರ ಎಲ್ಲಾ ಆಯಿತು. ಅವರು "ಸರ್ಟಿಫಿಕೇಟ್ ಬೇಕೇ ಬೇಕೇನಯ್ಯಾ?" ಎಂದು ಕೇಳಿದರು.

ಆಗ ನಾನು "ನಮ್ಮವರೊಬ್ಬರಿದ್ದಾರೆ. ವಿದ್ಯಾವಂತರೂ ಸಾಹುಕಾರರೂ ಆಗಿದ್ದಾರೆ. ಅವರು ತಮ್ಮ ಸರ್ಟಿಫಿಕೇಟನ್ನು ನೋಡಿದರೆ,

ಸಂತೋಷಪಟ್ಟು, ಅವರ ಮಾತಿನ ಪ್ರಕಾರ ಅವರ ಮಗಳನ್ನು ಕೊಟ್ಟು ಮದುವೆ ಮಾಡುತ್ತಾರೆ" ಎಂದು ನಾಚುತ್ತಾ ಹೇಳಿದೆ. ಅವರಿಗೆ ಉತ್ಸು ಕತೆ ಹುಟ್ಟಿರಬೇಕು. ಆಗ ಕೇಳಿದರು, "ಏನಯ್ಯಾ ನೀನು ಹೇಳೋದು ವಿಚಿತ್ರವಾಗಿದೆಯಲ್ಲ. ಮದುವೆಗೂ ಇದಕ್ಕೂ ಏನು ಸಂಬಂಧ? ಸರಿ ಯಾಗಿ ಹೇಳಬಾರದೆ?"

ಅವರ ಮುಖದಲ್ಲಿ ಕಾತುರತೆ ಕಾಣುತ್ತಿತ್ತು. ನಗುವೂ ಮೂಡಿತ್ತು. ನಾನು ಬೆಪ್ಪಾದೆ. ಅಧಿಕಾರಿಗಳ ಎದುರಿನಲ್ಲಿ ಸುಳ್ಳು ಹೇಳಲಿಕ್ಕೆ ಆಗುತ್ತದೆಯೇ? ಅಂತೂ ಹೇಳಿದೆ. ಅವರೂ ನಕ್ಕರು. ಆಮೇಲೆ ಸರ್ಟಿಫಿಕೇಟ್ ಕೊಟ್ಟರು" ಎಂದು ಹೇಳಿದ. ಅಷ್ಟರಲ್ಲಿ ನಾನು "ನೋಡಿದೆಯಾ? ದಾಟಿಸಿಬಿಟ್ಟೆ ಕತೇನ?" ಎಂದೆ. ಅವನು "ನಿಮಗೆ ಹೇಗೆ ಗೊತ್ತು ಕತೆ ದಾಟಿಸಿದೆ ಅಂತ" ಎಂದು ಕೇಳಿದ. ನಾನು "ಆ ಹುಡುಗೀ ಕೂಡ ವಾಗ್ದಾನ ಮಾಡಿರಲಿಲ್ಲವೇ? ಹೇಳು ವಿಸ್ತಾರವಾಗಿ" ಅಂದೆ. ಅವನು ತುಸ ನಗುತ್ತಾ ಹೇಳಿದ. "ನಿಮಗೆಲ್ಲಾ ಗೊತ್ತು. ಇನ್ನೇನು ನಾನು ಹೇಳೋದು."

ನನಗೆ ರೇಗಿತು: "ನನಗೆ ಗೊತ್ತಿದ್ದರೆ ನಿನ್ನನ್ನೇಕೆ ಕೇಳುತ್ತಿದ್ದೆ. ಹೇಳಪ್ಪಾ ಸುಮ್ಮನೆ" ಎಂದೆ. ಅವನು ಮುಗುಳ್ನಗೆ ಬೀರಿ ಮುಂದು ವರಿಸಿದ.

"ನಾನು ಹುಡುಗನಾಗಿದ್ದಾಗ, ಒಂದು ಸ್ಕೂಲಿಗೆ ಹೋಗ್ತಾ ಇದ್ದೆ. ಆ ಸ್ಕೂಲಿನಲ್ಲಿ ಒಂದು ಹುಡುಗಿ ಇದ್ದಳು. ಎಷ್ಟಾಗಲಿ ಹಳ್ಳಿಸ್ಕೂಲು. ಹೆಣ್ಣುಹುಡುಗರು, ಗಂಡುಹುಡುಗರು ಎಲ್ಲಾ ಒಂದೇ ಕಡೆ ಓದುವುದು. ಅವಳು ಸಂಗೀತದಲ್ಲಿ ಗಟ್ಟಿಗಳು; ನಾನು ಲೆಕ್ಕದಲ್ಲಿ ಗಟ್ಟಿಗ. ಇಬ್ಬರೂ ಒಂದೇಕಡೆ ಓದಿದೆವು. ಆಮೇಲೆ ಮಿಡ್ಲ್ ಸ್ಕೂಲಿಗೂ ಬಂದೆವು. ಸರಿ ನಮ್ಮ ಸ್ನೇಹ ಬೆಳೆಯಿತು. ನನಗಾಗ ೧೪ ವರ್ಷ: ಅವಳಿಗೆ ಕೇವಲ ೮ ವರ್ಷ. ನಾನು ನಾಲ್ಕನೇ ತರಗತಿಗೆ ಬಂದಿದ್ದೆ: ಅವಳಿನ್ನೂ ಎರಡನೇ ತರಗತಿಯಲ್ಲಿದ್ದಳು. ಆಗ ಒಂದು ನಾಟಕ ಆಡಿದೆವು. ನಾನೇ ದುಷ್ಯಂತ ಅವಳೇ ಶಕುಂತಲ. ಸರಿ, ನಾಟಕ ಚೆನ್ನಾಗಿತ್ತೆಂದು ಎಲ್ಲರೂ ಹೇಳಿದರು. ನಮಗೆ ರಾಜಾರಾಣಿ ಎಂದು ಹೆಸರಾಗಿತ್ತು ನಾನು ಪರೀಕ್ಷೆಗೆ ಕಟ್ಟಿ,

ಎರಡು ಸಲ ಢುಂಕೀ ಹೊಡೆದೆ. ಅಷ್ಟು ಹೊತ್ತಿಗೆ ಅವಳೂ ನನ್ನ ಕ್ಲಾಸಿಗೇ ಬಂದಳು. ಇಬ್ಬರೂ ಒಂದೇ ಸಲ ಪರೀಕ್ಷೆಗೆ ಕಟ್ಟಿದೆವು. ಆ ವರ್ಷ ಇಬ್ಬರಿಗೂ ಪಾಸ್ ಏನೋ ಆಯಿತು.

ಆಮೇಲೊಂದುದಿನ, ಒಂದು ವರ್ಷ ಆದ ಮೇಲೆ, ಇಬ್ಬರೂ ಭೇಟಿ ಯಾದೆವು. ಅವಳಿಗೆ ಹೇಳಿದೆ "ಈಗೇನೋ ನಾವಿಬ್ಬರೂ ಹೀಗಿದ್ದೇವೆ. ಮುಂದೆ ಹೀಗೇ ಇದ್ದರೆ ಚೆನ್ನಾಗಿರುತ್ತೆ ಅಲ್ಲವೆ?"

ಅವಳು ನಗುತ್ತಾ ಹೇಳಿದಳು: "ನಮ್ಮ ಅಪ್ಪ ನನಗೆ ಬೇರೆ ಕಡೆ ಮದುವೆ ಮಾಡ್ಬೇಕೂ ಅಂತ ಇದ್ದಾನೆ. ನಿನಗೆ ತಾಯಿತಂದೆ ಇಲ್ಲ ವಾದ್ದರಿಂದ ನಿನಗೆ ಕೊಡಲಿಷ್ಟವಿಲ್ಲ, ಈಗೇನು ಮಾಡುವುದು?"

"ನಾನು ಬಡವನಾದರೂ ಕೂಡ ಮುಂದೆ ಸಂಪಾದನೆ ಮಾಡು ತ್ತೇನೆ" ಎಂದೆ ನಾನು.

ಅಷ್ಟುಹೊತ್ತಿಗೆ ಅವಳ ತಂದೆ ಬಂದುಬಿಟ್ಟ. ನನಗೆ ಭಯ ವಾಯಿತು: ಅವಳೂ ಬೆಚ್ಚಿಬಿದ್ದು ಸುಮ್ಮನೆ ನಿಂತುಬಿಟ್ಟಳು. ಆಗ ಅವನು ಹೇಳಿದ. "ನೀವು ಇಬ್ಬರೂ ರಾಜ ರಾಣಿಯರೇನೋ ಸರಿ ಆದರೆ ಇದು ಮಾತ್ರ ಸರಿಯಲ್ಲ" ಎನ್ನುತ್ತಾ ಮಗಳನ್ನು ಹತ್ತಿರಕ್ಕೆ ಕರೆದ. ಅವಳು ನಿಧಾನವಾಗಿ ತನ್ನ ಇಷ್ಟವನ್ನು ಅಪ್ಪನಿಗೆ ತಿಳಿಸಿದಳು. ಆಗ ಅವರಪ್ಪ "ನೀನೇನೋ ಹೇಳ್ತೀಯೆ. ಆದರೆ ಒಂದು ವಿಷಯ. ಅವನೇನೋ ಬುದ್ಧಿವಂತ. ಅದಕ್ಕೆ ತಕ್ಕಂತೆ ಧೀರನಾದರೆ ಅವನಿಗೇ ಕೊಟ್ಟು ಮದುವೆ ಮಾಡ್ತೇನೆ. ಏಕೆಂದರೆ ನಾವು ಕ್ಷತ್ರಿಯರು. ಆದರೆ. ಅವನಲ್ಲ. ಅವನು ಧೀರನ ಕೆಲಸ ಮಾಡಿದರೆ ಅವನೂ ಕ್ಷತ್ರಿಯ ನಾಗುತ್ತಾನೆ" ಎಂದು ಮಗಳ ತಲೆ ಸವರುತ್ತಾ ಹೇಳಿದ.

ನಾನು ಅದನ್ನು ಕೇಳಿ, "ಧೀರನಾಗುತ್ತೇನೆ" ಎಂದೆ. ಅವನು "ಅಗತ್ಯವಾಗಿ, ಧೀರತನಕ್ಕೆ ಗುರುತೇನು?" ಎಂದ. ಅವಳು ಥಟಕ್ಕನೆ "ಹುಲಿ ಹೊಡೆಯಬೇಕು. ಅದೇ ಧೈರ್ಯದ ಗುರುತು" ಎಂದು ಬಿಟ್ಟಳು. ಆಗ ನಾನು "ಓಹೋ! ಆಗಬಹುದು. ಹುಲಿ ತಂದು ತೋರಿಸುತ್ತೇನೆ. ಆಗ ಅವಳ ಮಾತಿನಂತೆ..." ಎಂದೆ. ಅವಳ ತಂದೆಯು "ಆಗಬಹುದು. ಅದುವರೆಗೂ ಅವಳಿಗೆ ಮದುವೆ ಮಾಡು

ವುದಿಲ್ಲ" ಎಂದು ಮಾತುಕೊಟ್ಟ. ಆಮೇಲೆ ನಾನು ಏನೇನೊ ಸಾಹಸ ಬಿದ್ದೆ. ಎಲ್ಲೆಲ್ಲೋ ಡ್ರೈವರ್ ಆದೆ. ಫಾರೆಸ್ಟ್ ಇಲಾಖೆ ಆಫೀಸರ್ ಹತ್ತಿರ ಕೆಲಸ ಮಾಡಿದೆ. ಆದರೆ ಹುಲಿ ಹೊಡೆಯೋ ಸಾಹಸ ನನಗಿಲ್ಲದೆ ಹೋಯಿತು. ಈಗ ಆ ಸಮಯ ಸಿಕ್ಕಿಬಿಡ್ತು . . . . . ಸಾಹೇಬರು ಸರ್ಟಿಫಿಕೇಟ್ ಕೊಟ್ಟರು. ನಾನು ಸಂತೋಷದಿಂದ ಹೊರಟುಬಿಟ್ಟೆ. ಎಲ್ಲಾ ತಮ್ಮ ಕೃಪೆ ಸಾರ್" ಎಂದು ಕಥೆ ಹೇಳಿದ.

ಕಥೆ ಕೇಳಿ ನನಗೂ ಆಶ್ಚರ್ಯವಾಯಿತು. ಆದರೆ ಮುಂದೇನಾಯಿತೆಂಬುದು ತಿಳಿಯಬೇಕಲ್ಲ. ಅಷ್ಟು ಹೊತ್ತಿಗೆ ಗಡಿಯಾರದಲ್ಲಿ ಹನ್ನೆರಡು ಹೊಡೆಯಿತು. ಡ್ರೈವರು - "ಹಸಿವಾಗುತ್ತಿದೆ ಸಾರ್; ಬನ್ನಿ ಹೋಟೆಲಿಗೆ ಹೋಗೋಣ" ಎಂದು ಕರೆದ. ಆದರೆ ನಾನು "ನೀನು ಹೋಟೆಲಿಗೆ ಹೋಗ್ತೀಯೇನು? ನಾನು ನಮ್ಮ ನೆಂಟರ ಮನೆಗೆ ಹೋಗ್ತೀನೆ. ಬಸ್ ಹೊರಡೋಕೆ ಒಂದು ಘಂಟೆ ಮುಂಚೆ ಬರ್ತೀನೆ" ಎಂದು ಹೇಳಿ ಅವನ ರೂಮಿನಿಂದ ಹೊರಟೆ. ನಾನು ನನ್ನ ಕೆಲಸವೆಲ್ಲ ಹಾಳಾಯಿತೆಂದುಕೊಂಡು, ಪೇಟೆಗೆ ಹೋಗಿ, ಬೇಕಾಗಿದ್ದ ಕೆಲವು ಗಂಧದ ಸಾಮಾನುಗಳನ್ನು ತೆಗೆದುಕೊಂಡು ಬಸ್ ಸ್ಟ್ಯಾಂಡಿಗೆ ಬಂದೆ. ಸಾಮಾನನ್ನೆಲ್ಲ ಹಾಕಿದ್ದಾಯಿತು. ಬಸ್‌ನಲ್ಲಿ ಯಥಾಪ್ರಕಾರ ಕುಳಿತೆ. ಡ್ರೈವರೂ ಬಂದು ನನ್ನ ಪಕ್ಕದಲ್ಲಿ ಕುಳಿತ. "ಕಡೆಗೇನು ಮದುವೆ ಆಯಿತೊ?" ಎಂದೆ.

ಅವನು "ಆಗುವುದೇನು? ಆ ಸರ್ಟಿಫಿಕೇಟ್ ತೆಗೆದುಕೊಂಡು ನಮ್ಮೂರಿಗೆ ಹೋದೆ. ಅದೇ ಹುಡುಗಿ ಬೆಳೆದುಬಿಟ್ಟಿದ್ದಳು. ನಾವಿಬ್ಬರೂ ವಾಗ್ದಾನ ಮಾಡಿಕೊಂಡು ಏಳು ವರ್ಷಗಳಾಗಿದ್ದವು. ನಾನು ಅವಳ ರೂಪು ನೋಡಿ ಬೆರಗಾಗಿಬಿಟ್ಟೆ. ನನ್ನನ್ನು ನೋಡಿಯಂತೂ ಅವಳು ಗಾಳಿ ತುಂಬಿದ ಟ್ಯೂಬಿನ ಹಾಗೆ ಉಬ್ಬಿಹೋದಳು. ನನಗೆ ಉಪಚಾರವಾಯಿತು. ಅವಳ ತಂದೆ ನನ್ನ ಕಥೆ ಕೇಳಿ ಮೆಚ್ಚಿಕೊಂಡ. ಅದಾದ ಒಂದು ವಾರಕ್ಕೇ ಲಗ್ನ; ಕೇಳಬೇಕೆ? ಸಾಹುಕಾರ - ಲಕ್ಷಾಧೀಶ್ವರ" ಎಂದು ಬೇಗ ಬೇಗನೆ ಹೇಳುತ್ತಿದ್ದ.

ಅಷ್ಟರಲ್ಲಿ ನಾನು "ನೀನೇ ಧನ್ಯ. ನಿನಗೇನು ಕಡಿಮೆ? ನೀನೂ ಸಾಹುಕಾರನೇ. ಇದ್ದರೆ ಹೀಗಿರಬೇಕು. ಡೆಪ್ಯುಟೀಕಮೀಷನರ್‌ರಿಂದ

ಪುರಸ್ಕಾರ, ಸಾಹುಕಾರ ಮಾವ, ಚಿಕ್ಕಂದಿನಿಂದಲೂ ಪ್ರೇಮವಿಟ್ಟಿದ್ದ ಪ್ರಣಯದ ಗೆಳತಿ ಬೇರೆ" ಎಂದೆ.

ಅವನು ಅದನ್ನು ಕೇಳಿ, "ಹೌದು ಸಾರ್, ನಾನು ಇಷ್ಟರವುಟ್ಟಿಗೆ ಆಗ್ತೇನೆ ಅಂತ ಕಂಡಿರಲಿಲ್ಲ. ಏನೋ ಎಲ್ಲಾ ದೇವರ ಅಧೀನ. ಅವನ ದಯೆ" ಎಂದು ಹರ್ಷಚಿತ್ತನಾಗಿ ನುಡಿದ. ಅವನೊಡನೆ "ಏನಯ್ಯಾ-ನೀನೇ ಮಾಲೀಕನಾಗಿ ನೀನೇ ಡ್ರೈವ್ ಮಾಡುತ್ತಿ?" ಎಂದೆ. ಅವನು ನಗುತ್ತಾ "ಆಗಲೀ ಸಾರ್, ವ್ಯಾಪಾರ ಕುದುರುವತನಕ ಹೀಗೇ 'ಸಿಂಪಲ್' ಆಗೇ ಇರಬೇಕು" ಎಂದ. ಆಗ ನನಗೆ ಮತ್ತಷ್ಟು ಆಶ್ಚರ್ಯವಾಯಿತು.

ಅಷ್ಟರಲ್ಲಿ ಕಂಡಕ್ಟರು "೩-೩೦ ಆಗಿಹೋಯಿತು. ಸ್ಟಾರ್ಟ್ ಮಾಡಪ್ಪಾ" ಅಂದ. 'ರೈಟ್' ಎಂದು ರಾಯಲ್ ಕಮ್ಯಾಂಡ್ ಹೊರ ಟಿತು. ಕೂಡಲೇ ಬಸ್ ಹೊರಟು ಬಿಟ್ಟಿತು.

ದಾರಿಯಲ್ಲಿ ಅವನನ್ನು "ನಾನು ಆನಾರಿ ಬಂದಿದ್ದಾಗ, 'ಬಡವ-ಡ್ರೈವರ್' ಅನ್ನುತ್ತಿದ್ದೆ. ಈಗ "ಡ್ರೈವರೇ ಮಾಲೀಕ' ಅನ್ನುತ್ತಿದ್ದೇನೆ. ಒಂದು ತಿಂಗಳಿನಲ್ಲಿ ಎಷ್ಟು ವ್ಯತ್ಯಾಸ" ಎಂದು ನಿಧಾನವಾಗಿ ಹೇಳಿದೆ.

ಅವನು ಹೇಳಿದ—"ಹೀಗೇ ಪ್ರಪಂಚ. ಸ್ವಲ್ಪ ದಿನ ಹೀಗೆ, ಸ್ವಲ್ಪ ದಿನ ಹಾಗೆ, ನಾನು ಮನೆ ಕಟ್ಟಿಸುತ್ತಾ ಇದ್ದೇನೆ. ಆ ಮೇಲೆ ಬಂದು ನೋಡಿ ಮನೆಯನ್ನು ಹೇಗಿರುತ್ತೋ."

ನನಗೆ ಸಂತೋಷವಾಗಿ "ಆಗಲಿ-ಖಂಡಿತಾ ಬರ್‍ತೇನೆ; ನಿಮ್ಮ ಮಾದರಿ ಸಂಸಾರ ನೋಡಿ ಸಂತೋಷ ಪಡುತ್ತೇನೆ" ಎಂದ.

ಅವನು ನಗುತ್ತಾ ಬಸ್ ನಡೆಸುತ್ತಿದ್ದ. ಹೀಗೆ ಆ ಮಾತು ಈ ಮಾತು ಆಡುವಷ್ಟು ಹೊತ್ತಿಗೆ ನಾನು ರಸ್ತೆಯಲ್ಲಿ ಇಳಿಯಬೇಕಾದ ಸ್ಥಳಕ್ಕೆ ಬಂದ. ಡ್ರೈವರಿಗೆ ಹೇಳಿ ಬಸ್ ನಿಲ್ಲಿಸಿ, ಕೆಳಗಿಳಿದು, "ನಮಸ್ಕಾರ ನಾರಾಯಣ ಸ್ವಾಮಿ, ಹೋಗಿ ಬರುತ್ತೇನೆ" ಎನ್ನುತ್ತಾ ಹೊರಟೆ.

ಅವನ ಸಂಸಾರ ಮಾದರಿಯಾಗಿಯೇ ಇರಬಹುದು. ನಾನಿನ್ನೂ ಅತ್ತಕಡೆ ಹೋಗಿಲ್ಲ. ಅವನ ಮುಳಿಷಿಕಾರಿಯ ಕಥೆಯು ಇನ್ನೂ ನನ್ನ ಮನಸ್ಸಿನಲ್ಲಿ ಅಚ್ಚಳಿಯದೇ ಇದೆ.



# ಕಮಲೆ ಕತೆ

[ಶ್ರೀ. ಕುಪ್ಪುರವರ 'ಜಿಟರ್ ವರ್ಲ್ಡ್' ಎಂಬ ಕಥೆಯ ಆಧಾರದ ಮೇಲೆ]

——::——

ಭಯಂಕರವಾದ ಅರಣ್ಯದ ಮಧ್ಯೆ ಒಂದು ಪುಟ್ಟ ಗುಡಿಸಲು. ಅದರ ಸುತ್ತಲೂ ಸೊಗಸಾದ ಹೂ ಗಿಡಗಳು; ನೀಳವಾದ ಮರಗಳು; ಅವುಗಳ ಮೇಲೆ ಕುಳಿತು ಹಾಡುವ ಪಕ್ಷಿಗಳು. ಆ ಗುಡಿಸಿಲನ್ನು ನೋಡಿ ದೊಡನೆಯೇ ಅದೊಂದು ಆಶ್ರಮವೆಂದು ಭಾಸವಾಗುತ್ತಿತ್ತು. ಆ ಗುಡಿಸಿಲಿನಲ್ಲಿ ಹೆಚ್ಚಿಗೆ ಯಾವ ಸಾಮಾನುಗಳಿಲ್ಲದಿದ್ದರೂ ಒಂದು ಚಾಪೆ, ಒಂದು ಕೃಷ್ಣಾಜಿನ, ಒಂದು ಭಿಕ್ಷಾಪಾತ್ರೆ ಇಷ್ಟೇ ಇದ್ದದ್ದು.

ಒಂದು ದಿನ ಅಲ್ಲಿಗೆ ಒಬ್ಬಾತ ಬಂದ. "ಒಳಕ್ಕೆ ಬನ್ನಿ; ಮಳೆಯಲ್ಲಿ ನೆನೆಯಬೇಡಿ"-ಎಂಬ ಮಾರ್ದನಿ ಗುಡಿಸಿಲಿನಿಂದ ಹೊರಹೊರಟಿತು. ಆತ ಒಳಕ್ಕೆ ಬಂದ. ಆತನೆದುರಿಗೆ ಸುಂದರ ಪ್ರತ್ಥಿಮೆಯಂತೆ, ದೇವಿಕನ್ಯೆಯಂ ಬಂತೆ, ಪ್ರಕೃತಿದೇವತೆಯಂತೆ ಬೆಳಗುತ್ತಿರುವ ಒಂದು ವ್ಯಕ್ತಿ ಬಂದು ನಿಂತು, "ತಾವು ಯಾರು? ಬಂದ ಉದ್ದಿಶ್ಯವೇನು?" ಎಂದಿತು.

"ತಾಯಿ! ನಾನು ಹೀಗೆಯೇ ಸುತ್ತಾಡುತ್ತಾ ಬಂದೆ. ಮಳೆ ಬಹಳ ವಾಯಿತು. ನಿಮ್ಮಲ್ಲಿಗೆ ರಕ್ಷಣೆಗಾಗಿ ಬಂದೆ."

"ಮುಂದೆಲ್ಲಿಗೆ ಪ್ರಯಾಣ."

"ತಿಳಿಯದು."

"ಹಾಗೆಂದರೇನು?"

"ನಾನು ಯಾರನ್ನೋ ಹುಡುಕಿಕೊಂಡು ಹೊರಟಿದ್ದೇನೆ. ಎಲ್ಲಿಗೆ ಅಂದರೆ ಅಲ್ಲಿಗೆ ಹೊರಟು ಹೋಗುತ್ತೇನೆ."

"ನೀವೇಕೆ ಇಷ್ಟು ದುಃಖದಿಂದ ಮಾತನಾಡುತ್ತಿರುವಿರಿ. ನಿಮ್ಮ ಬಾಳಿನಲ್ಲಿ ಏನೋ ಒಂದು ವಿಪತ್ತು ಬಂದಿದ್ದ ಹಾಗೆ ತೋರುತ್ತೆ. ಹೌದೆ?"

"ಖಂಡಿತವಾಗಿಯೂ ತಾಯಿ, ನೀನು ಸತ್ಯವನ್ನು ನುಡಿಯುತ್ತಿದ್ದೀ."

"ಬಹಳ ಸಂತೋಷ. ನೀವು ಈ ಸಂಜೆ ಈ ಭಯಂಕರ ಕಾನನದಲ್ಲಿ ಸಂಚಾರಮಾಡಲು ಸಾಧ್ಯವಿಲ್ಲ. ಇಲ್ಲಿಯೇ ಇದ್ದು ಬೆಳಿಗ್ಗೆ ಹೊರಡಿರಿ."

"ಆಗಲಿ ತಾಯಿ."

ತುಸು ಹೊತ್ತು ಮೌನ. ಆಕೆ ಅಡಿಗೆ ಮನೆಗೆ ಹೋಗಿ ಸ್ವಲ್ಪ ಆಹಾರವನ್ನು ತಂದು ಆತನಿಗೆ ಕೊಟ್ಟಳು. ಆತ ಆಕೆಯ ನಡತೆಗೆ, ಮಾತಿಗೆ, ವಿನಯಕ್ಕೆ ಬೆರಗಾಗಿ ಹೋದ.

ತಿನ್ನುತ್ತಾ ಆತನು ಕಂಠ ಸರಿಪಡಿಸಿಕೊಂಡು, ಒಂದು ಪ್ರಶ್ನೆ ಹಾಕಿದ. "ಅಮ್ಮ ನಿಮ್ಮನ್ನು ನೋಡಿದರೆ, ಯಾವುದೋ ಒಂದು ಗಂಧರ್ವ ಸ್ತ್ರೀಯಂತೆ ಕಾಣುತ್ತೀರಿ. ಆದರೆ ನೀವು ಹೀಗೆ ಅರಣ್ಯದಲ್ಲಿ ದೇವರ ಧ್ಯಾನ ಮಾಡಿಕೊಂಡು, ಭಿಕ್ಷುಣಿಯಂತೆ ಇದ್ದೀರಲ್ಲಾ. ಅದಕ್ಕೆ ಕಾರಣ ವನ್ನು ಕೇಳಬಹುದೇ?"

"ಊಟ ಮಾಡಿರಿ, ಆಮೇಲೆ ಹೇಳುತ್ತೇನೆ" ಎಂದಳು ಆಕೆ.

೦ ೦ ೦ ೦

"ನಾನೊಬ್ಬ ಭಿಕಾರಿಯೆಂದು ತಿಳಿಯಿರಿ. ನನ್ನ ಸರ್ವಸ್ವವನ್ನೂ ಕಳೆದುಕೊಂಡು ಇಂದು ಹೀಗೆ ಜೀವನ ಮಾಡುತ್ತಿದ್ದೇನೆ. ನನ್ನ ತಾಯಿ ನನ್ನನ್ನು ಬಹು ಪ್ರೀತಿಯಿಂದ ಸಾಕಿ ಸಲುಹಿದಳು. ಆಕೆಯು ನನಗಾಗಿ ದುಡಿದು, ನನಗಾಗಿ ಕೊರಗಿ, ಕಡೆಗೆ ನನಗೋಸ್ಕರವೇ ಒರಗಿದಳು. ನನ್ನ ಬಾಳಿನ ಕಥೆಯನ್ನು ಏನೆಂದು ಹೇಳಲಿ? ನನ್ನ ವಯಸ್ಸು ಸುಮಾರು ೬-೭ ಇರಬಹುದು. ಆಗ್ಗೆ ನಾನು ನಮ್ಮ ತಾಯಿಯೊಂದಿಗೆ ಕಾರ್ಖಾನೆಯೊಂ ದಕ್ಕೆ ಹೋಗುತ್ತಿದ್ದೆ. ನನ್ನ ತಾಯಿ ಆ ಕಾರ್ಖಾನೆಯಲ್ಲಿ ಕೂಲಿಗಾರಳು.

ಒಂದು ದಿನ ನಾನು ನಮ್ಮ ತಾಯಿಯನ್ನು ಬಹು ಕುತೂಹಲದಿಂದ ಕೇಳಿದೆ: "ಅಮ್ಮಾ ನೀನೇಕೆ ಕೆಲಸ ಮಾಡುವುದು? ನಮ್ಮ ತಂದೆ ಆಸ್ತಿ ವಂತ, ಸಾಹುಕಾರ ಎಂದು ನನ್ನ ಸ್ನೇಹಿತರು ಹೇಳುತ್ತಾರಲ್ಲ?"

ಆಕೆಯು ಒಮ್ಮೆ ನನ್ನನ್ನು ನೋಡಿ ನಗುತ್ತಾ, ಒಮ್ಮೆ ಅಳುತ್ತಾ ಹೀಗೆಂದಳು: "ಮಗೂ, ನಿನಗೆ ತಿಳಿಯದು. ನಿಮ್ಮ ತಾತ ಮಾಡಿದ ಸಾಲ, ನಿಮ್ಮ ತಂದೆ ಮಾಡಿದ ಸಾಲ ಎರಡೂ ಸೇರಿತು. ಪ್ಲೇಗುಮಾರಿ ಬಂದು ನಿಮ್ಮ ತಂದೆಯನ್ನು ಸೆಳೆದುಕೊಂಡು ಹೋಯಿತು. ನೀನು ಅನಾಥ ಳಾದೆ. ಸಾಲಗಾರರು ಬಂದು ನಮ್ಮ ಆಸ್ತಿಯನ್ನು ಹರಾಜು ಮಾಡಿ ದರು. ಇನ್ನು ನಮಗೆ ಉಳಿದುದೇನು? ಅದಕ್ಕೇ ನಾವು ಹೀಗೆ ಪಾಡು

ಬೀಳುತ್ತಿರುವುದು. ತಿಳಿಯಿತೆ ಮಗೂ, ಇನ್ನುಮೇಲೆ ಇಂತಹ ಪ್ರಶ್ನೆಯನ್ನು ಕೇಳಬೇಡ."

ನನಗಂತೂ ನಮ್ಮಮ್ಮನ ಬಾಳು ನೋಡಿ ಅಯ್ಯೋ ಎನ್ನಿಸಿತು. ನನ್ನ ಸ್ನೇಹಿತರು ಹಬ್ಬ ಬಂದಾಗ ಬೇಕಾದ ಹಾಗೆ ತಿಂದರೆ, ನಾವು ಒಣಕಲ ರೊಟ್ಟಿ ಹಿಟ್ಟು, ಅದು ಬಿಟ್ಟರೆ ಬೇರೆ ಗತಿಯಿಲ್ಲ. ಹಾಗೂ ಹೀಗೂ ಬಹು ಕಾಲ ಕಳೆಯಿತು. ನನಗೆ ಸುಮಾರು ೧೫-೧೬ ವರುಷವಾಯಿತು. ಬುದ್ಧಿ ಸ್ವಲ್ಪ ಬಂತು; ನಾನೂ ಒಬ್ಬ ಜೀತಗಾರಳಾದೆ. ನನ್ನ ತಾಯಿಗೆ ವಯಸ್ಸಾಗುತ್ತಾ ಬಂತು. ನಾನೇ ಅಡಿಗೆ ಮಾಡುತ್ತಿದ್ದೆ. ಹೀಗಿರುವಲ್ಲಿ ನನಗೆ ಒಬ್ಬ ಸಹಪಾಠಿಯನ್ನು ದೇವರು ಒದಗಿಸಿಕೊಟ್ಟ. ಅವನ ಹೆಸರು "ಆನಂದ್" ಎಂದು. ಅವನು ಹರಿಜನ ಜಾತಿಯವನು. ಆದರೂ ಬುದ್ಧಿ ಬಲದಲ್ಲಿ, ಶಕ್ತಿಯಲ್ಲಿ, ವಿದ್ಯೆಯಲ್ಲಿ ಯಾರಿಗೇನೂ ಕಡಿಮೆ ಇರಲಿಲ್ಲ. ಅವನಿಗೂ ನನಗೂ ಪರಿಚಯವಾಯಿತು. ನಮ್ಮ ತಾಯಿ ಅವನನ್ನು ಕರೆದು ಊಟಕ್ಕಿಡುತ್ತಿದ್ದಳು. ಅವನು ಪಕ್ಕದ ಹಳ್ಳಿಯಿಂದ ಬರುತ್ತಿದ್ದ.

ಅವನು ನಮಗೆ ಆಹಾರ ಪದಾರ್ಥಗಳನ್ನೊದಗಿಸುವುದು, ಬಟ್ಟೆಬರೆ ತಂದು ಕೊಡುವುದು, ಮುಂತಾದ ಅನೇಕ ಸಹಾಯಗಳನ್ನು ಮಾಡುತ್ತಿದ್ದನು. ಈ ಸುದ್ದಿ ಅವನ ತಂದೆಗೆ ತಿಳಿಯಿತು. ಅವನ ನೆಂಟರಿಗೆಲ್ಲಾ ತಿಳಿಯಿತು. ಅವರು ನನ್ನನ್ನು ನೀರಿಗೆ ಹೋದಾಗ ಹಳಿಯುವುದು, ಅಣಕಿಸುವುದು ಹೀಗೆಲ್ಲಾ ಮಾಡುತ್ತಿದ್ದರು. ನಾನು ಈ ಸುದ್ದಿಯನ್ನು ಆನಂದನಿಗೆ ತಿಳಿಸಿದೆ. ಅವನು ನನಗೆ ಭರವಸೆಕೊಟ್ಟ. ಇಷ್ಟರಲ್ಲಿ ನಮ್ಮ ತಾಯಿಗೆ ಜ್ವರ ಬಂದಿತು. ಆಗ ಆನಂದ ಮಾಡಿದ ಸೇವೆ ಇಷ್ಟೆಂದು ಹೇಳಲು ಸಾಧ್ಯವಿಲ್ಲ. ಅದನ್ನು ಕಂಡು ನಮ್ಮ ತಾಯಿ "ಅಪ್ಪಾ, ಆನಂದ, ಇನ್ನು ನಾನು ಬದುಕುವುದು ಕಷ್ಟ; ಈ ನನ್ನ ಮಗಳು ಪುಟ್ಟ ಕಮಲೆಯನ್ನು ಕಾಪಾಡುವುದು ನಿನ್ನ ಭಾರ" ಎಂದು ಬೇಡಿಕೊಂಡಳು.

"ತಾಯಿ, ಪ್ರಮಾಣವಾಗಿಯೂ ನಿಮ್ಮ ಮಾತನ್ನು ತಪ್ಪುವುದಿಲ್ಲ. . ." ಎಂದು ಹೇಳುತ್ತಿರುವಷ್ಟರಲ್ಲಿ ಹೊರಗಡೆ ಗಲಭೆಯಸದ್ದು ಕೇಳಿಸಿತು. ಹರಿಜನರ ತಂಡವೇ ಬಂದು ಬಿಟ್ಟಿದೆ. ಆನಂದ ಗಾಬರಿಯಿಂದ ಹೊರಕ್ಕೆ ಬಂದ. ಅವನನ್ನು ಅವರ ತಂದೆ ಸೆಳೆದುಕೊಂಡು, "ನಡೀ ಮನೇ ಕಡೆಗೆ" ಎನ್ನುತ್ತಾ

ಊರ ಕಡೆಗೆ ನೂಕಿ ಬಿಟ್ಟ. ಇನ್ನು ಕೆಲವರು 'ಅವಳನ್ನು ಸೆಳೆಯಿರಿ ಅವಳಿಂದ ನಮ್ಮ ಹುಡುಗ ಕೆಟ್ಟ' ಎಂದು ಬೊಬ್ಬೆ ಇಟ್ಟರು. ಕಡೆಗೆ ನನ್ನನ್ನೆಳೆದು, ಹೊಡೆದು, ಬಡಿದರು. ಈ ದೃಶ್ಯ ನೋಡಲಾರದೆಯೋ, ಜ್ವರದ ಬೇಗೆ ಹೆಚ್ಚಾಗಿಯೋ, ಇಹಲೋಕದ ಪಾಪಕೃತ್ಯದಿಂದ ಪಾರಾಗುವುದಕ್ಕಾಗಿಯೋ ನನ್ನ ತಾಯಿ ತೀರಿಹೋದಳು.

೦ ೦ ೦ ೦

"ಆಮೇಲೆ-ಆಮೇಲೆ" ಎಂದ ಆ ಮುದುಕ ಅತಿಥಿ.

"ಆಮೇಲೆ ನನ್ನನ್ನು ಚೆನ್ನಾಗಿ ಹೊಡೆದ ಬಳಿಕ, ನನಗೆ ಜ್ಞಾನವೇ ತಪ್ಪಿಹೋಯಿತು. ಸ್ವಲ್ಪ ಹೊತ್ತಾದ ಬಳಿಕ ಎದ್ದು ನೋಡುತ್ತೇನೆ. ಈ ಕಾಡಿನಲ್ಲಿದ್ದೇನೆ. ಇನ್ನು ಏನು ಮಾಡುವುದಕ್ಕೂ ತೋರಲಿಲ್ಲ. ದಿಕ್ಕು ತೋಚದೆ ಸುಮ್ಮನಿದ್ದೆ. ಯಾರೊಬ್ಬರ ಸುಳಿವೇ ಕಾಣಲಿಲ್ಲ. ಅನಾಥಳಾದೆ, ಅಜ್ಞಾನಿಯಾದೆ, ಕಡೆಗೆ ದೇವರ ಧ್ಯಾನ ಸರಿಯೆಂದು ತೀರ್ಮಾನಿಸಿ ಹೀಗೆ ಭಿಕ್ಷಾಟನೆಯಿಂದ ಜೀವಿಸುತ್ತಿದ್ದೇನೆ" ಎಂದು ಹೇಳುತ್ತಿರುವಲ್ಲಿ, ಆ ಮುದುಕ ಬಾಯಿಹಾಕಿ "ಆನಂದನೆಲ್ಲಿ?" ಎಂದು ಕೇಳಿದ.

"ನಾನು ಕಾಡಿಗೆ ಬಂದಮೇಲೆ ಅವನ ಗತಿ ಏನಾಯಿತೋ ತಿಳಿದು."

"ಅವನಿಲ್ಲಿಗೆ ಬರಲಿಲ್ಲವೋ?"

"ಅವನು ಇಲ್ಲಿಗೆ ಬರಲು, ನಾನಿಲ್ಲಿರುವುದು ಆತನಿಗೆ ತಿಳಿಯದು."

"ಹಾಗೇನು? ನಾನು ಆವನನ್ನೇ ಹುಡುಕಿಕೊಂಡು ಬಂದಿದ್ದೇನೆ."

"ಏನು?"

"ಸರಿ, ಆ ಕಮಲೆ! ಆನಂದನ ಹೆಂಡತಿ. ಕಮಲೆ ನೀನೇ ಅಲ್ಲವೆ?"

"ಹೌದು ಖಂಡಿತವಾಗಿ!"

"ಅಯ್ಯೋ ದೌರ್ಭಾಗ್ಯವೇ - ಪಾಪಿ ನಾನು. ಕಡುಪಾಪಿ ನಾನು. ನಾನೇ ಆ ಚಂಡಾಲ ನಿನ್ನನ್ನು ಹೊಡೆದವನು. ಆ ಮುದ್ದು ಆನಂದನ ತಂದೆ ನಾನೇ. ನಿನ್ನ ಗುಣ, ರೂಪು ಇವುಗಳ ಮಹತ್ವವನ್ನು ತಿಳಿಯದೆ, ನಾನು ನಿಮ್ಮನ್ನು ಅಗಲಿಸಿದೆನಲ್ಲ. ತಾಯಿ ಕ್ಷಮಿಸಬೇಕು."

"ನಾನಲ್ಲ ಕ್ಷಮಿಸುವವಳು, ಅದೋ ಆ ಭಗವಂತ. ಆದರೆ ನೀವು ನಿಜವಾಗಿಯೂ ಧನ್ಯರು. ತತ್ವವನ್ನರಿತು ಪಶ್ಚಾತ್ತಾಪ ಪಡುತ್ತಿರುವಿರಿ.

ನಿಮ್ಮ ಮಾರ್ಪಾಟು ನೋಡಿ ಬಹಳ ಸಂತೋಷವಾಯಿತು. ನಿಜವಾಗಿಯೂ ನೀವೇ ನನ್ನ ಮಾವ" ಎಂದು ಹೇಳುತ್ತಿರುವಷ್ಟರಲ್ಲಿ, ಆ ವೃದ್ಧ ದಿಗ್‌ಭ್ರಾಂತನಾಗಿ ಅವಳ ಕಾಲಿಗೆ ಬಿದ್ದು ಹೊರಳಾಡಿ, ತನ್ನನ್ನು ತಾನೇ ಹೀಯಾಳಿಸಿಕೊಂಡು ಪೇಚಾಡಿದ.

ಸ್ವಲ್ಪ ಹೊತ್ತು ಸಾಗಿತು. "ತಾಯಿ, ಕಮಲಾ ನಿನ್ನ ಕತೆ ಸಾಕು: ಬುದ್ಧನಿಗೆ ಜ್ಞಾನ ಬಂದ ಹಾಗೆ, ನನಗೆ ಏನೋ ಗೋಚರವಾಗುತ್ತಿದೆ. ನಡೆ ನಾವಿನ್ನು ಹೊರಟು ಆನಂದನನ್ನು ಪತ್ತೆಮಾಡೋಣ" ಎಂದನು. ಅವಳೂ ಒಪ್ಪಿದಳು. ಇಬ್ಬರೂ ಹೊರಟರು.

ಅದೊಂದು ಶೃಂಗಾರ ನಗರ: ಬೀದಿಗಳೆಲ್ಲಾ ದೀಪಮಯ; ಇಕ್ಕೆಲವಲ್ಲಿ ಸೌಧಗಳು; ಜನಸಂದಣಿ; ಮೋಟಾರು ವಾಹನಗಳ ಗಡಿಬಿಡಿ; ಸೈಕಲ್‌ಗಳ ಸಂಭ್ರಮ; ವ್ಯಾಪಾರಗಾರರ ಅವಾಂತರ. ಇವರಿಬ್ಬರೂ ದೊಡ್ಡ ರಸ್ತೆಯೊಂದರಲ್ಲಿ ಹೋಗುತ್ತಿದ್ದಾಗ, ಇದ್ದಕ್ಕಿದ್ದ ಹಾಗೆಯೇ ಒಂದು ಕಾರು ಧಡಾರನೆ ಬಂದುಬಿಟ್ಟಿತು. ಒಂದೆರಡು ನಿಮಿಷಗಳೊಳಗಾಗಿ ಮುದುಕನು ಸತ್ತುಹೋಗುತ್ತಿದ್ದನು. ಅಷ್ಟರಲ್ಲಿ ಕಾರು ನಿಂತಿತು. ಅದರಲ್ಲಿದ್ದವನು ಕೆಳಕ್ಕಿಳಿದು, 'ಕ್ಷಮಿಸಿ' ಎಂದು ಕೇಳಿಕೊಂಡ. ಇದಕ್ಕೆ ಸರಿಯಾಗಿ ವಿಪರೀತ ಮಳೆಗೆ ಆರಂಭವಾಯಿತು. ಆಗ ಕಾರಿನ ಒಡೆಯ "ನೀವೆಲ್ಲಿಗೆ ಹೋಗಬೇಕು? ಬೇಕಾದರೆ ಇದೇ ಕಾರಿನಲ್ಲಿ ಕುಳಿತುಕೊಳ್ಳಿರಿ" ಎಂದ.

"ಅಯ್ಯೋ ವಿಧಿಯೇ, ನಾನು ಏನೆಂದು ಹೇಳಲಿ? ನಾವು ಯಾರೋ ಒಬ್ಬರನ್ನು ಹುಡುಕಿಕೊಂಡು ಹೊರಟಿದ್ದೇವೆ. ಅವರ ಮನೆಯನ್ನು ತೋರಿಸಿಕೊಟ್ಟರೆ ನಿಮಗೆ ಪುಣ್ಯ ಬರುತ್ತೆ" ಎಂದ ಆ ವೃದ್ಧ.

"ಆತನ ಅಡ್ರೆಸ್ ಗೊತ್ತೋ?"

"ಹೆಸರೇನೋ 'ಆನಂದ್' ಎಂದು. ಆದರೆ ಅಡ್ರಸ್ ತಿಳಿಯದಲ್ಲಾ. ಇದೋ ಈಕೆ ಅವನ ಹೆಂಡತಿ. ಅವಳೂ ಪೇಚಾಡುತ್ತಿದ್ದಾಳೆ" ಎಂದು ಹೇಳಿದ. ವೃದ್ಧನ ಮಾತು ಕೇಳಿ, ಕಾರುಮಾಲೀಕನಿಗೆ ಆಶ್ಚರ್ಯವಾಗಿ, ಆ ಸ್ತ್ರೀಯನ್ನೇ ದೃಷ್ಟಿಸಿ ನೋಡತೊಡಗಿದ. ಮರು ಮಾತಾಡದೆ ಅವರನ್ನು ಕಾರಿನಲ್ಲಿ ಕುಳ್ಳಿರಿಸಿಕೊಂಡು ಸ್ವಲ್ಪ ದೂರ ಹೋಗಿ,

ಕಾರನ್ನು ನಿಲ್ಲಿಸಿ, ಅಲ್ಲಿಯೇ ಇದ್ದ ಒಂದು ಮಹಡಿಮನೆಯನ್ನು ತೋರಿಸಿ, " ಇದೋ ಇದೇ ಆನಂದನ ಮನೆ" ಎಂದ.

ಕಾರಿನಿಂದ ಮೂವರೂ ಇಳಿದರು. ಆ ಮನೆಯೊಳಕ್ಕೆ ಹೊರಟರು. ಮುದುಕನೂ ಆಕೆಯೂ ಈಚೆ ವರಾಂಡದಲ್ಲಿ ನಿಂತರು. ಹೊರಗೆ ಮಳೆ ಬೀಳುತ್ತಲೇ ಇತ್ತು. ಒಳಗಿನಿಂದ " ಕಮಲಾ, ಒಳಕ್ಕೆ ಬಾ " ಎಂಬ ದನಿ ಕೇಳಿಸಿತು. ಕಮಲೆ ಒಳಕ್ಕೆ ಹೊರಟಳು. ತನ್ನೆದುರಿಗಿದ್ದ ಪುರುಷನನ್ನು ನೋಡಿ, ' ಆನಂದ್ ! ಆನಂದ್ !' ಎಂದು ಹೇಳಿ ಆನಂದಪರವಶಳಾದಳು.

ಅಷ್ಟು ಹೊತ್ತಿಗೆ ವೃದ್ಧನೂ ಓಡಿಬಂದ. ಆತ ಕೇಳಿದ: " ಕಾರಿನಲ್ಲಿ ಕರೆತಂದವರು ಯಾರು? ನೀವೇ ಅಲ್ಲವೇ ? " ಎಂದು.

ಆತ ಹೇಳಿದ: " ಹೌದು; ನಾನೇ."

" ಆನಂದನು ನೀನೇಯೇನು ? "

" ಕಮಲೆಯನ್ನು ಕೇಳಿ."

" ಆನಂದ! ನನ್ನ ಮಗು, ನಾನು ನಿಮ್ಮ ತಂದೆ."

' ತಂದೆ ' ಎಂಬ ಮಾತನ್ನು ಕೇಳಿ ಆನಂದನ ಆನಂದಕ್ಕೆ ಮಿತಿಯೇ ಇಲ್ಲದೆ ಹೋಯಿತು.

ಆನಂದನ ತಂದೆ ಆನಂದನನ್ನೂ ಕಮಲೆಯನ್ನೂ ಕರೆದು ಕುಳ್ಳಿರಿಸಿಕೊಂಡು " ಮಕ್ಕಳಿರಾ! ನನ್ನಂತಹ ಪಾಪಿಯನ್ನು ಏನೆಂದು ಗೌರವಿಸುವಿರಿ? ನನ್ನ ಅಪರಾಧವನ್ನು ಕ್ಷಮಿಸಿಬಿಡಿ. ನೀವಿಬ್ಬರೂ ಸೌಖ್ಯವಾಗಿ ಬಾಳಿ. ನಾನು ಮಾತ್ರ ಭಿಕ್ಷುವಾಗಿಯೇ ಜೀವಿಸುತ್ತೇನೆ. ನನಗೆ ದೇವರ ಧ್ಯಾನವೇ ಸಾಕು" ಎಂದು ಹೇಳಿ ಮಳೆಯಲ್ಲಿ ಮಾಯವಾದ.

ಆನಂದ ಕಮಲೆಯರು ಪರಸ್ಪರ ಕಥೆಗಳನ್ನು ಹೇಳಿಕೊಂಡು ನಕ್ಕರು. ಕಮಲೆ ಕೇಳಿದಳು: " ಈಗ ನೀವು ಇಷ್ಟು ಸಾಹುಕಾರರಾದದ್ದು ಹೇಗೆ?"

" ನೋಡು ಕಮಲಾ, ನಿನ್ನನ್ನು ಬಿಟ್ಟು ಐದು ವರ್ಷಗಳಾದುವು. ನಾನು ಇಲ್ಲಿ ಮಿಲಿಟರಿ ಕಂಟ್ರಾಕ್ಟು ಮಾಡುತ್ತೇನೆ. ನಾನು ಮೊದಲು ಮೇಸ್ತ್ರಿ ಕೆಲಸಕ್ಕೆ ಸೇರಿದೆ. ದೇವರ ಕೃಪೆಯಿಂದ ಈಗ ನಾನೇ ಮೇಸ್ತ್ರಿಗಳನ್ನು ನೇಮಿಸಿದ್ದೇನೆ" ಎಂದ. ಕಮಲೆಯ ಆನಂದಕ್ಕೆ ಮಿತಿಯುಂಟೆ?



# ಮೊಟ್ಟೆ ಗಾತ್ರದ ರಾಗಿಕಾಳು

[ಟಾಲ್ ಸ್ಟಾಯ್‌ರವರ ಒಂದು ಕಥೆಯ ಆಧಾರದಮೇಲೆ]

——::——

ಮಕ್ಕಳಿಗೇನು ಕಂಡರೂ ಆಶ್ಚರ್ಯವೇ! ಅದರಲ್ಲೂ ವಿಚಿತ್ರವಸ್ತುವನ್ನು ಕಂಡರೆ ಮತ್ತಷ್ಟು ಆನಂದ. ಒಂದು ದಿನ ನಮ್ಮೂರ ಬೀದಿಯಲ್ಲಿ ಮಕ್ಕಳೆಲ್ಲಾ ಗೋಲಿ ಆಡುತ್ತಿದ್ದರು. ಮಾಣಿ ಇದ್ದಕ್ಕಿದ್ದ ಹಾಗೆಯೇ ಓಡಿದ. ಎಲ್ಲರೂ ಹುಚ್ಚರಂತೆ ಅವನ ಹಿಂದೆ ಓಡುತ್ತಿದ್ದರು. ಮಾಣಿ ಕೈಚಾಚಿ ಏನನ್ನೋ ತೆಗೆದುಕೊಂಡು, ಯಾರಿಗೂ ಸಿಕ್ಕದಂತೆ ಸುತ್ತಾಡಿದ. ಎಲ್ಲರೂ ಅವನನ್ನು ಸುತ್ತುಗಟ್ಟಿದರು. ಅವನು ಅದನ್ನು ತೋರಿಸುವ ತನಕ ಯಾರೂ ಬಿಡುವಂತಿರಲಿಲ್ಲ. ಸರಿ ಮಾಣಿ ಕೇಳಿದ: "ಯಾರು ಹೇಳ್ತೀರಿ ನನ್ನ ಕೈಲಿ ಏನಿದೆ ಅಂತ" ಎಂದು.

ನಾಣಿ, "ಕೈ ತೆಗೆ, ನಾನು ಬೇಕಾದರೆ ಹೇಳುತ್ತೇನೆ" ಎಂದ. ಅಷ್ಟರಲ್ಲಿ ಭೀಮು "ನಿನ್ನ ಕೈಲಿರೋದು ಗಾಜಿನ ಗೋಲಿ" ಎಂದು ಹಾಸ್ಯ ಮಾಡಿದ. ಶೀನ ಮುಂದೆ ಬಂದು "ಬಿಡಿಗಾಸು ನಂದುಕಣೋ ಕೊಟ್ಟು ಬಿಡು" ಎಂದು ನಟಿಸಿದ. ಅಂತೂ ಯಾರೊಬ್ಬರೂ ಸರಿಯಾದ ಉತ್ತರ ಹೇಳಲಿಲ್ಲ. ಎಲ್ಲರ ಕೈಗೆ ಸಿಕ್ಕಿದ ಮಾಣಿಯ ಪಾಡು ಕೇಳಬೇಕೆ? ಹೊಡೆದೂ ಬಡಿದೂ ಕೈಬಿಡಿಸಿದರು. ಜೇಬನ್ನೂ ಹರಿದರು. ಆಗ ಅವರು ಕಂಡದ್ದೇನು? ಏನೂ ಅಲ್ಲ; ಒಂದು ದಪ್ಪನೆಯ ರಾಗಿಕಾಳು. ರಾಗಿಯಂತಲೂ ಹೇಳಲಾಗದು. ಒಂದು ಕಪ್ಪನೆಯ ಕಾಳೆಂದರೆ ಸರಿಯಾದೀತು. ಅಷ್ಟು ದೊಡ್ಡ ಕಾಳನ್ನು ಇದುವರೆಗೂ ಯಾರೊಬ್ಬರೂ ಕಂಡಿರಲಿಲ್ಲ. ತಕ್ಷಣವೇ ಎಲ್ಲರೂ ಹೋಗಿ ತಾತನ ಹತ್ತಿರ ಸಮಾಚಾರವನ್ನು ತಿಳಿಸಿ, ಕಾಳನ್ನು ತೋರಿಸಿದರು. ತಾತನಾದ ರಾಮಣ್ಣ ಅದನ್ನು ನೋಡಿ, ಆಶ್ಚರ್ಯದಿಂದ "ಭಲೆ - ಎಂತಹ ವಿಚಿತ್ರ! ಯಾರಿದನ್ನು ಹುಡುಕಿದವರು?" ಎಂದು ನಶ್ಯವನ್ನು ಏರಿಸುತ್ತಾ ಕೇಳಿದ. ನಾಣಿಯಂತೂ ನಗೆಯುತ್ತಾ 'ನಾನು' ಎಂದರಚಿದ. ಅಲ್ಲಿದ್ದವರೆಲ್ಲ ಒಂದೇ ಧ್ವನಿಯಿಂದ "ನಾವೆಲ್ಲರೂ ಸೇರಿ" ಎಂದರು. ಆಗ ತಾತ "ಹೇಗಾದರೂ ಆಗಲಿ,

ನಾನಿದನ್ನು ಮೈಸೂರಿಗೆ ಹೋದಾಗ ಮಹಾರಾಜರಿಗೆ ಅರ್ಪಿಸುತ್ತೇನೆ. ಬಹುಮಾನ ಬಂದರೆ ಗಿಂದರೆ ನಿಮಗೆಲ್ಲಾ ಚಿರೋಟಿ ಕೊಡುತ್ತೇನೆ" ಎಂದ. ಹುಡುಗರೆಲ್ಲಾ ನೆಗೆಯುತ್ತ ಓಡಿದರು. ಚಿರೋಟಿ ಎಂದಿಗೆ ಬೀಳುತ್ತೋ ಎಂದು ಅವರೆಲ್ಲಾ ಕಾದಿದ್ದರು.

೦ ೦ ೦ ೦

ರಾಮಣ್ಣ ಅರವತ್ತು ವರ್ಷದ ಮುದುಕ. ನೋಡವುದಕ್ಕೆ ಅಷ್ಟು ವಯಸ್ಸಾದವನಂತೆ ಕಾಣುತ್ತಿರಲಿಲ್ಲ. ರಾಮಣ್ಣನ ಅಣ್ಣನೊಬ್ಬನಿದ್ದ; ಸುಬ್ಬರಾಯಪ್ಪನೆಂದು. ಅವರಿಗೆ ಅಷ್ಟು ವಯಸ್ಸಾಗಿದ್ದರೂ ಹಲ್ಲುಗಳು ಚೆನ್ನಾಗಿಯೆ ಇದ್ದುವು. ಹೇಗಾದರೂ ಆಗಲಿ ಇಬ್ಬರೂ ಮುದುಕರೇ. ಮೈಸೂರಿಗೆ ಇವರಿಬ್ಬರೂ ಹೊರಡಲಸುವಾದರು. ಅವರ ಹಿಂದೆ ರಾಮಣ್ಣನ ಮಗ (ಕೃಷ್ಣಮೂರ್ತಿ) ಕಿಟ್ಟನೂ ಒಬ್ಬ ಆಳೂ ಹೊರಟರು. ಅಂತೂ ನಾಲ್ವರೂ ಮೈಸೂರು ಸೇರಿದರು. ಮೈಸೂರಿನಲ್ಲಿ ಸಾಹಸಪಟ್ಟು ಅರಮನೆಗೆ ಹೋದರು. ಆ ರಾಗಿಕಾಳನ್ನು ಬಹು ಜೋಪಾನವಾಗಿ ತೆಗೆದುಕೊಂಡು ಹೋಗಿ, ಒಂದು ಚಿಕ್ಕ ಸುರುಳಿಯಲ್ಲಿಟ್ಟು, ಮಹಾರಾಜರಿಗೆ ಅರ್ಪಿಸಿದರು.

ಅದನ್ನು ಅಲ್ಲಿದ್ದ ವಿದೂಷಕರು ಕಂಡು, ಆಶ್ಚರ್ಯದಿಂದ "ಏನಯ್ಯಾ ಇದು! ನಿನ್ನ ತಲೆ, ಇದೇಯೋ ರಾಜನಿಗೆ ಕಾಣಿಕೆ?" ಎಂದು ಹಿಂದೆ ಬಂದು ಗದ್ದರಿಸಿದರು. ಆಗ ಕಿಟ್ಟ ಸ್ವಲ್ಪವೂ ಹೆದರದೆ "ಇದು ವಿಚಿತ್ರವಾದ ರಾಗಿ ಕಾಳು! ತಿಳೀತೇ! ಇಂತಹುದು ಇನ್ನೆಲ್ಲಿಯೂ ಸಿಗಲಾರದು. ಅದಕ್ಕೇ ಇಲ್ಲಿ ತಂದಿರೋದು" ಎಂದ. ಆಗ ಅಲ್ಲಿನ ಪಂಡಿತರೆದ್ದು ಸಮಾಧಾನ ಮಾಡಿದರು. ಕಡೆಗೆ ಆ ರಾಗಿಕಾಳಿನ ಮೇಲೆ ಚರ್ಚೆ ನಡೆಯಿತು. ಇಷ್ಟೆಲ್ಲಾ ಆಗುವಾಗ್ಗೆ ರಾಜನ ದೃಷ್ಟಿ ಅಲ್ಲಿ ಬೀಳದೆ ಇದ್ದೀತೆ? ಸರಿ, ರಾಜರು ಕೇಳಿದರು: "ಏನ್ರೀ, ಇದು ಎಲ್ಲಿ ಸಿಕ್ಕಿತು ನಿಮಗೆ?" ಎಂದು.

ಕಿಟ್ಟ: "ಮಹಾಪ್ರಭೋ, ಅದು ನಮ್ಮ ಹುಡುಗರಿಗೆ ಸಿಕ್ಕಿದ್ದು. ಹೆಚ್ಚಿನ ಸಂಗತಿ ಬೇಕಾದರೆ ನಮ್ಮ ತಂದೆಯವರನ್ನೇ ಕೇಳಬೇಕು" ಎಂದ.

ರಾಮಣ್ಣ ಮುಂದೆ ಬಂದು, "ಹೌದು ನಮ್ಮ ಹುಡುಗರು ಇದನ್ನು ತಂದರು. ನಮ್ಮ ಕಣಜದ ಹತ್ತಿರ ಸಿಕ್ಕಿತಂತೆ. ನಾನಂತೂ ಇಂತಹ

ಕಾಳನ್ನೂ ಕಾಣೆ. ನಮ್ಮ ಕಾಲದಲ್ಲಿ ಇಷ್ಟು ದಪ್ಪವೂ ಇರಲಿಲ್ಲ. ಈಗಿನಷ್ಟು ಸಣ್ಣದೂ ಆಗಿರಲಿಲ್ಲ" ಎಂದ. ಹೀಗೆ ಸಂವಾದ ಬೆಳೆಯಿತು.

ರಾಜ: "ನೀನೆಂದಾದರೂ ಇಂತಹ ಕಾಳು ಬಿತ್ತಿದ್ದೆಯಾ?"

ರಾಮಣ್ಣ: "ಇಲ್ಲ."

ರಾಜ: "ಎಂದಾದರೂ ಕೊಂಡಿದ್ದೆಯಾ?"

ರಾಮಣ್ಣ: "ಇಲ್ಲ."

ರಾಜ: "ಹಾಗಾದರೆ ಇದು ಯಾವ ಕಾಲದ್ದು?"

ರಾಮಣ್ಣ: "ನನಗೆ ತಿಳಿಯದು. ನಮ್ಮ ತಾತನವರ ಕಾಲದ್ದಿರಬೇಕು. ನಮ್ಮಣ್ಣನನ್ನು ಕೇಳಿದರೆ ಹೇಳುತ್ತಾರೆ."

ರಾಜ: "ನಿಮಗೆ ಗೊತ್ತೇನ್ರೀ-ಇದರ ವಿಚಾರ, ನೀವು ಬೆಳೆದಿದ್ದಿರಾ?"

ಸುಬ್ಬರಾಯಪ್ಪ: "ನಮ್ಮ ಕಾಲದಲ್ಲೇನೋ ಬೆಳೆಯಲಿಲ್ಲ. ನಮ್ಮ ತಾತನ ಕಾಲದಲ್ಲಿ ಬೆಳೆಯುತ್ತಿದ್ದರೆಂದು ಬಲ್ಲೆ. ಆದರೆ ಅಷ್ಟಾಗಿ ನೆನಪಿಲ್ಲ."

ರಾಜ: "ಎಂದಾದರೂ ಕೊಂಡಿದ್ದಿರಾ?"

ಸುಬ್ಬ: "ಎಂದಿಗೂ ಇಲ್ಲ. ನಾನು ಹುಡುಗನಾಗಿದ್ದಾಗ್ಗೆ ಮಾರುವ ಪದ್ಧತಿಯನ್ನೇ ಕಾಣೆ. ಹಣವೆಂಬುದನ್ನೇ ನಾನು ತಿಳಿದಿರಲಿಲ್ಲ. ನಮ್ಮ ಮನೆಯಲ್ಲಿ ಧಾನ್ಯ ಮುಗಿದು ಹೋದರೆ ಇದ್ದವರು ಕೊಡುತ್ತಿದರು. ಅದಕ್ಕೇ ಆಗ್ಗೆ ದವಸದ ಕಾಳುಗಳು ಅಷ್ಟು ದಪ್ಪಗಿರುತ್ತಿದ್ದವು."

ರಾಜ: "ಇದು ನಿಜವಾಗಿಯೂ ರಾಗಿಯ ಕಾಳೋ?"

ಮುದುಕ ಕಾಳನ್ನು ರುಚಿನೋಡಿ, "ಹೌದು ಮಹಾ ಪ್ರಭೂ, ಇದು ರಾಗಿಯೇ" ಎಂದ.

ರಾಜ: "ಇಂತಹ ಕಾಳು ನಿಮ್ಮ ಹೊಲದಲ್ಲಿ ಮಾತ್ರ ಬೆಳೆಯುತ್ತಿತ್ತೋ ಅಥವಾ ಎಲ್ಲೆಲ್ಲೂ ಬೆಳೆಯುತ್ತಿತ್ತೋ?"

ಸುಬ್ಬ: "ಎಲ್ಲೆಲ್ಲೂ ಬೆಳೆಯುತ್ತಿತ್ತು."

ರಾಜ: "ಹಾಗಾದರೆ ಯಾರೂ ಕೊಳ್ಳುತ್ತಲೇ ಇರಲಿಲ್ಲವೆ?"

ಸುಬ್ಬ: "ನಮ್ಮ ಹೊಲ ಇಂತಹುದೇ ಎಂದು ಈಗಿನಂತೆ ಆಗ ನಿಶ್ಚಿತವಾಗಿರಲಿಲ್ಲ. ನಾನೆಲ್ಲಿ ಉತ್ತು ಬಿತ್ತರೆ, ಅದೇ ನನ್ನ ಹೊಲ. ಸ್ವಂತ; ಪರ ಎಂಬ ಭೇದವೇ ಇರಲಿಲ್ಲ."

ರಾಜ: "ಏನಾಶ್ಚರ್ಯ! ಆಗ ದೊರೆ ಯಾರು ?"

ಸುಬ್ಬ: "ರಾಜರು ಯಾರೋ ನನಗೆ ಸರಿಯಾಗಿ ತಿಳಿಯದು. ಬಹುಶಃ ನಿಮ್ಮ ತಾತಂದಿರಿರಬಹುದು."

ರಾಜ: "ಇರಬಹದು. ಸರಿ, ನಿಮ್ಮ ಹೆಸರೇನು?"

ರಾಮಣ್ಣ: "ನನ್ನ ಹೆಸರು . . . ಎನ್ನುವಷ್ಟರಲ್ಲಿ ಕಿಟ್ಟನು ಮುಂದೆ ಬಂದು 'ಕೃಷ್ಣಮೂರ್ತಿ' ಎಂದುಬಿಟ್ಟ. ಅಲ್ಲಿದ್ದ ಗುಮಾಸ್ತರು 'ಕೃಷ್ಣ ಮೂರ್ತಿ' ಎಂದೇ ಬರೆದುಕೊಂಡರು.

ರಾಜ: "ಆಗಲಿ, ತಮಗೆ ಇನ್ನೂ ವೇಳೆಯಿದ್ದರೆ ನಾನಿನ್ನೆರಡು ಪ್ರಶ್ನೆ ಕೇಳುತ್ತೇನೆ."

ಸುಬ್ಬ: "ಅದಕ್ಕೇನು ಆಗಬಹುದು ಮಹಾಸ್ವಾಮಿ."

ರಾಜ: "ಮೊದಲನೆಯದು: ಆಗೇಕೆ ಇಂತಹ ಕಾಳು ಬೆಳೆಯುತ್ತಿತ್ತು; ಈಗೇಕೆ ಬೆಳೆಯುತ್ತಿಲ್ಲ? ಎರಡನೆಯದು: ನಿಮ್ಮ ತಮ್ಮನೇಕೆ ಕುಂಟುತ್ತಾನೆ; ಅಲ್ಲದೆ ಕಿವಿ ಕಿವುಡೇಕೆ, ಕಣ್ಣು ಕುರುಡೇಕೆ; ಅವನ ಮಗನಾದ ಆ ಹುಡುಗನೇಕೆ ಕಣ್ಣಿಗೆ ಕನ್ನಡಕ ಹಾಕಿಕೊಂಡಿದ್ದಾನೆ, ಕಾಲಿಗೇಕೆ ಜೋಡು ಹಾಕಿದ್ದಾನೆ, ಅವನೇಕೆ ಅಷ್ಟು ಸುಖಿಯಾಗಿದ್ದಾನೆ, ನೀವಂತೂ ಏನೂ ಇಲ್ಲದೆ ಬರೀ ದುಪಟಿಯೊಂದರಲ್ಲೇ ಇದ್ದೀರೇಕೆ, ನಿಮ್ಮ ಹಲ್ಲು ಗಟ್ಟಿಗಿದೆ; ಕಣ್ಣು ಚೆನ್ನಾಗಿದೆ; ಕಿವಿ ಚುರುಕಾಗಿದೆ; ಮಾತೂ ಚೆನ್ನಾಗಿದೆ; ನಯವಾಗಿದೆ."

ಸುಬ್ಬ: "ಇದನ್ನೆಲ್ಲಾ ನೀವು ಹೇಗೆ ತಿಳಿದಿರಿ?"

ರಾಜ: "ಚೆನ್ನಾಗಿ ಪರೀಕ್ಷಿಸಿದೆ ಅಷ್ಟೆ. ಅದಿರಲಿ, ನಾನು ಕೇಳಿದ್ದಕ್ಕೆ ಉತ್ತರವೇನು?"

ಸುಬ್ಬ: "ಅದಕ್ಕೆ ಕಾರಣವಿಷ್ಟೆ. ರೈತರು ಸೋಮಾರಿಯಾಗಿದ್ದಾರೆ. ತಮ್ಮ ಕೆಲಸಕ್ಕೆ ಪರರನ್ನು ಬಯಸುತ್ತಾರೆ. ಈಗ ಕಾನೂನುಗಳ ಕಾಟ ಬಹಳವಾಗಿದ. ಆಗ ದೇವರ ಕಾನೂನೇ ಕಾನೂನು. ಆಗಿದ್ದ ದೈವಭಕ್ತಿ, ರಾಜಭಕ್ತಿ ಈಗಿಲ್ಲ. ಆಗ ತಾವು ಬೆಳದದ್ದನ್ನು ತಾವು ತಿಂದು, ಮಿಕ್ಕದ್ದನ್ನು ದಾನಮಾಡುತ್ತಿದ್ದರು. ಈಗಲಾದರೋ ತಾವೂ ತಿನ್ನದೆ ಮಿಗಿಸಿ, ಗಂಟು ಮಾಡುತ್ತಾರೆ. ಗಂಟನ್ನೆಲ್ಲಾ ಕರಗಿಸಿ ಕೋರ್ಟು ಕಛೇರಿಗೆ

ಎರೆಯುತ್ತಾರೆ. ಆಗ ಕಾಸೂ ಇಲ್ಲ, ಮೋಸವೂ ಇಲ್ಲ. ಈಗ ಕಾಸಿಗೆ ತಕ್ಕ ಮೋಸ. ಕಾನೂನು, ಕಾಯಿದೆ, ವಾಯಿದೆ ಇವೆಲ್ಲಾ ಮಿತಿ ಮೀರುತ್ತಿದೆ. ಅವರ ಅನ್ನ ಅವರಿಗೆ ಪರಮಾನ್ನ. ನನಗೆ ತಿಳಿದದ್ದು ಇಷ್ಟೇ! ಬಹಳ ತಡವಾಯಿತು. ದಯವಿಟ್ಟು ಕ್ಷಮಿಸಬೇಕು.''

೦ ೦ ೦ ೦

ಮಹಾರಾಜರು ಬೆರಗಾದರು. ಸುಬ್ಬರಾಯಪ್ಪನನ್ನು ತಮ್ಮ ಆಸ್ಥಾನದಲ್ಲಿರಿಸಿಕೊಂಡರು. ಉಳಿದಿಬ್ಬರಿಗೆ ಬಹುಮಾನವಿತ್ತರು. ರಾಮಣ್ಣ ಕೃಷ್ಣಮೂರ್ತಿ ಇಬ್ಬರೂ ಊರಿಗೆ ಬಂದರು. ಮಕ್ಕಳಿಗೆಲ್ಲಾ ತಮ್ಮ ಮಾತಿನಂತೆ ಚಿರೋಟಿ ಹಂಚಿದರು.



# ಜ್ವಾಲೆ

———::———

ಅಂದು ಸರಳೆಯ ಮೊಗದಲ್ಲಿ ನಗೆದಿಂಗಳು ಬೆಳಗುತ್ತಿತ್ತು. ಅವಳು ತನ್ನ ಮನೋಹರನನ್ನು ಮನದಲ್ಲಿಯೇ ಧ್ಯಾನಿಸುತ್ತ ಪತಿಪರಾಯಣೆ ಯಾಗಿದ್ದಳು. ತನ್ನ ಪತಿಯು ದೇಶಸೇವಾಧುರಂಧರರಲ್ಲಿ ಒಬ್ಬನಾಗಿ ಕಾರಾಗೃಹವಾಸವನ್ನು ಅನುಭವಿಸುತ್ತಿದ್ದುದು ಮಾತ್ರ ಸರಳೆಯ ಹೃದಯ ವನ್ನು ಕರಗಿಸಿ, ಅಲ್ಲೋಲ ಕಲ್ಲೋಲ ಮಾಡಿತ್ತು. ಹಾಗೆಯೇ ಬೆಳಗು ತ್ತಿದ್ದ ನಗೆದಿಂಗಳು ಇಳಿಮುಖಕ್ಕಿಳಿಯಿತು.

ಸುಧಾಕರರಾಯ ಒಬ್ಬ ಸಮಾಜ ಸುಧಾರಕ: ತರುಣ ಸಾಹಿತಿ, ಗ್ರಾಮಸೇವೆಯಲ್ಲಿ ಹೆಚ್ಚಿನ ಅಭಿರುಚಿಯುಳ್ಳವ: ಸಂಗೀತಪ್ರಿಯ: ಕನ್ನಡ ಭಾಷಣ ಧುರೀಣ: ಮಹಾತ್ಮ ಗಾಂಧಿಯವರ ಅಚ್ಚುಮೆಚ್ಚಿನ ಭಕ್ತ: ಕಲಾಶಾಲೆಯಲ್ಲಿ ವ್ಯಾಸಂಗ ಮಾಡಿದ ವಿದ್ಯಾವಂತ: ಆದರೆ ಪರಾಧೀನ ನಲ್ಲ, ಆಗುವವನೂ ಅಲ್ಲ. ಸ್ವತಂತ್ರಮನೋಭಾವವುಳ್ಳವ. ಎಲ್ಲ ಕ್ಕಿಂತಲೂ ಮಿಗಿಲಾಗಿ ಹಸನ್ಮುಖಿ.

ಸುಧಾಕರರಾಯ ಇಷ್ಟು ಯಶಸ್ವಿಯಾಗಿದ್ದರೂ, ಅಧಿಕಾರಿ ವರ್ಗ ದಲ್ಲಿಯೂ, ಖಾಸಗೀ ಮಹನೀಯರಲ್ಲಿಯೂ ಮೈತ್ರಿಯನ್ನು ಬೆಳೆಸಿ, ತನ್ನ ಪತ್ನಿ ಸರಳೆಯಲ್ಲಿ ನಿಷ್ಕಳಂಕ ಪ್ರೇಮವನ್ನಿಟ್ಟಿದ್ದ. ಅವನ ಮಾವ ಮಾತ್ರ ಇವನಲ್ಲಿ ಮೈತ್ರೀಭಾವದಿಂದಿರಲಿಲ್ಲ. ಸುಧಾಕರನಿಗೆ ತನ್ನ ಪ್ರೇಮದ ರಾಣಿ ಸರಳೆಯೊಂದಿಗೆ ಸ್ವಲ್ಪ ಹೊತ್ತಾದರೂ ಕಾಲ ಕಳೆಯುವು ದೆಂದರೆ ಏನೋ ಒಂದು ಅತಿಶಯ. ಅವಳನ್ನು ನೋಡಿದೊಡನೆ ಮಾತನಾಡಿ ತನ್ನದೊಂದು ಅಮೂಲ್ಯ ಕಾಣಿಕೆಯನ್ನು ಅವಳಿಗರ್ಪಿಸಬೇ ಕೆಂಬ ಹೆಬ್ಬಯಕೆ. ಆದರೆ ಇವೆಲ್ಲವೂ ಅವನಿಗೆ ಕನಸಾಗಿತ್ತು. ಮೂರು ತಿಂಗಳಾದರೂ ಸರಳೆಯ ಮೋರೆಯನ್ನೇ ಅರಿಯ ಆ ಸುಧಾಕರ. ವಿವಾಹ ವೈಭವದ ಮಹಾ ಸಂಭ್ರಮ ಸಡಗರದಲ್ಲಿ ತನ್ನ ಜೀವದ ಗೆಳತಿಯ ಸೌಕುಮಾರ್ಯದ, ನವತಾರುಣ್ಯದ, ಮೊಗದಾವರೆಯ ಸೌಂದರ್ಯದ ಸವಿ

ಯನ್ನು ಉಣಬಡಿಸಲು ಸಾಧ್ಯವಿದ್ದರೂ ಸಾಧ್ಯವಾಗಿರಲಿಲ್ಲ. ನೋಡಿದವರು ಏನೆಂದುಕೊಳ್ಳುವರೋ ಎಂಬ ಒಂದು ಶಂಕೆ ಎಲ್ಲರಿಗೂ ಇರುವಂತೆ ಸುಧಾಕರನಲ್ಲಿಯೂ ಇತ್ತು. ಆದುದರಿಂದಲೇ ಅವನು ಇಂದಿಗೂ ಅವಳ ಮುಖವನ್ನು ಕೂಡಾ ಸರಿಯಾಗಿ ಕಾಣದೆ, ತನ್ನ ಮನದಲ್ಲಿಯೇ ಕೊರಗುತ್ತಿದ್ದನು.

○ ○ ○ ○

ಸಿಂಘನಗರದ ಜಂಬುಕೇಶವಯ್ಯನವರು ತುಂಬಾ ಆಚಾರವಂತರು, ದೈವಭಕ್ತರು ನಿಷ್ಠರು: ಪ್ರಾಚೀನ ಸಂಪ್ರದಾಯಗಳಲ್ಲಿ ಹೆಚ್ಚಿನ ವಿಶ್ವಾಸವುಳ್ಳವರು. ಆದರೆ ತಾವು ತಮ್ಮ ಪತ್ನಿ ಇಬ್ಬರು ಹೊರತು ಮತ್ತೊಬ್ಬರ ಹಿತಚಿಂತನೆಯನ್ನೇ ಮಾಡುತ್ತಿರಲಿಲ್ಲ. ಅದರಿಂದ ಸ್ವಲ್ಪ ಸ್ವಾರ್ಥರೆಂದೇ ಹೇಳಬೇಕು. ತನ್ನ ಮಕ್ಕಳು ಪ್ರೌಢರಾಗುವವರೆಗೆ ಮಾತ್ರ ಅವರು ಗಮನ ಕೊಟ್ಟು, ಮದುವೆ, ಉಪನಯನ, ಪ್ರಸ್ತ ಮೊದಲಾದ ಕಾರ್ಯಗಳನ್ನು ನಡೆಸಿಬಿಟ್ಟರೆ, ತಮ್ಮ ಕರ್ತವ್ಯ ಅಲ್ಲಿಗೆ ಮುಗಿಯಿತೆಂಬುದೇ ಅವರ ಸಿದ್ಧಾಂತ. ಮಕ್ಕಳು ಹುಟ್ಟುವುದು ಸಾಯುವುದು ದೈವೇಚ್ಛೆ. ಹುಟ್ಟಿ ಬದುಕಿದ ಮೇಲೆ ಅವರಿಗೇನಾದರೂ ಒಂದು ದಾರಿ ತೋರಿಸಿಕೊಡುವುದು ತಂದೆಯ ಕರ್ತವ್ಯ. ಜಂಬುಕೇಶವಯ್ಯನವರಿಗೆ ಇಬ್ಬರು ಗಂಡುಮಕ್ಕಳು. ಮಗಳು ಮಾತ್ರ ಒಬ್ಬಳೇ. ಅವಳೇ ಸರಳೆ.

ಸರಳೆಯ ಮನಸ್ಸಿನಲ್ಲಿಯೂ ಸಹ ತನ್ನ ನಲ್ಲನನ್ನು ಕಣ್ಣಾರೆ ಕಂಡು ನಲಿಯಬೇಕೆಂಬ ಆಸೆ. ಅವನು ನಸುನಗುತ್ತಾ ಮುಂದೆ ಬಂದು, ತನ್ನ ನೀಳ ಬಾಹುಗಳಲ್ಲಿ ತನ್ನನ್ನು ಅಡಗಿಸಿಕೊಂಡು ಒಂದು ಮಾತನ್ನು ಉಸುರಿದರೆ, ಅದನ್ನು ಕೇಳಿ ಒಗ್ಗಬೇಕೆಂಬ ಹಿರಿಯ ಬಯಕೆ. ಆದರೆ! ಸರಳೆಯ ಆಸೆ ನಿರಾಶೆ.

ಜಂಬುಕೇಶವಯ್ಯನವರ ಎದುರಿನಲ್ಲಿ ಮಗ ಸೊಸೆ ಮಾತಾಡುವಂತಿಲ್ಲ. ಮಗಳು ಅಳಿಯ ನಲಿಯುವಂತಿಲ್ಲ. ಪ್ರಸ್ತವಾಗುವ ಮುಂಚೆ, ಹೊಸ ಅಳಿಯ ಮಗಳೊಡನೆ ಮಾತನಾಡಲೇ ಕೂಡದೆಂಬ ಕಟ್ಟಾಜ್ಞೆ. ಒಂದೊಂದು ವೇಳೆ ಅಳಿಯ ಬಂದರೂ ಸಹ ಒಂದೆರಡು ಮಾತಿನಲ್ಲಿಯೇ ಉಪಚರಿಸಿ, ಆಫೀಸ್ ರೂಮಿನಲ್ಲಿಯೇ ಕುಳ್ಳಿರಿಸಿ ಒಂದು ಲೋಟಾ ಕಾಫಿ

ಯಲ್ಲಿಯೇ ಅತಿಥಿಸತ್ಕಾರ ಮುಗಿಸುವ ಚಮತ್ಕಾರ ಅವರದು. ಅಳಿಯನಿಗೆ ಕಾಫಿ ಎಂದ ಕೂಡಲೇ ಕಿವಿ ನೆಟ್ಟಗಾಗಬಹುದು. ಏಕೆ? ಸರಳೆ ಕಾಫಿ ತರುವಳೆಂದು. ಕಾಫಿ ತರುವವರು ಸರಳೆಯೂ ಅಲ್ಲ, ಸರಳೆಯ ಅಣ್ಣನೂ ಅಲ್ಲ, ತಮ್ಮನೂ ಅಲ್ಲ, ಅತ್ತೆಯೂ ಅಲ್ಲ. ಸರಳೆಯ ಅಜ್ಜಿ. ಸಕ್ಕರೆ ಸುರಿದ ವಾಸನೆಯೇ ಇಲ್ಲದ ಒಂದು ಕಪ್ಪು ಕರಿಯ ಕಾಫಿ; ಸಾಕು ಅಳಿಯನಿಗೆ; ಅಷ್ಟಕ್ಕೆ ಅವನು ತೃಪ್ತಿಗೊಳ್ಳಬೇಕು.

ಸುಧಾಕರ ಹೊರಗಡೆ ಎಷ್ಟು ಯಶಸ್ವಿಯಾಗಿದ್ದರೇನು? ತನ್ನ ಒಲವಿನ ರಾಣಿಯ ಮನೆಯಲ್ಲಿ ಅವನಿಗೆ ಹರ್ಷವಿಲ್ಲ; ಆನಂದವಿಲ್ಲ. ಮಾವ ಅತ್ತೆ ಒಂದು ತರಹವಾದರೆ, ಭಾವಮೈದುನರು ಭಾವನ ನೆರಳನ್ನೇ ಅರಿಯರು. ಇಂತ ವಿಚಿತ್ರ ಸಂಸಾರ ಲಹರಿಯಲ್ಲಿ ಈ ಸುಧಾಕರನಿಗೆ ಯಾವ ಆನಂದದ ಅಲೆಯು ಹರ್ಷಗೊಳಿಸೀತು?

ಆದ್ದರಿಂದಲೇ ಅವನು ಜಗುಪ್ಸೆ ಯೂಂದಿದವನಾಗಿ ದೇಶಸೇವಾ ಸಂಸ್ಥೆಗೆ ಸೇರಿ, ದೇಶದಲ್ಲಿ ನಡೆಯುತ್ತಿರುವ ಆಂದೋಲನಗಳಲ್ಲಿ ಭಾಗವಹಿಸಿ, ದೇಶಸಂಚಾರ ಮಾಡಿ, ಸ್ಫೂರ್ತಿದಾಯಕ ಭಾಷಣಗಳನ್ನು ಮಾಡಿ, ತನ್ಮೂಲಕ, ಸಹಸ್ರಾರು ಮಂದಿಯನ್ನು ದೇಶಸೇವಕರನ್ನಾಗಿ ಪರಿವರ್ತಿಸಿ, ತಾನು ಎಲ್ಲರ ಪ್ರೀತಿಗೂ ಪಾತ್ರನಾಗಿ ತನ್ನೂರು, ತನ್ನ ಮನೆ, ತನ್ನ ಪತ್ನಿ ಎಲ್ಲವನ್ನೂ ತೊರೆದು "ದೇಶಸೇವೆಯೇ ಈಶಸೇವೆ" ಎಂಬ ಮಹಾಮಂತ್ರವನ್ನು ಅನುಸರಿಸಿ, ಇಂದು ಕಾರಾಗೃಹಕ್ಕೆ ತೆರಳಿದುದು. ಅವನೇನು ಹೇಡಿಯಲ್ಲ, ಅಥವಾ ಕೇಡಿಯೂ ಅಲ್ಲ.

o o o o

"ಪೂನಾದಲ್ಲಿ ಸುಧಾಕರರಾಯನ ಬಂಧನ" ಎಂಬ ಶಿರೋನಾಮೆಯು ನಾಡಪತ್ರಿಕೆಗಳಲ್ಲಿ ಕಾಣಬಂತು. ಪುಣ್ಯಾತ್ಮರೊಬ್ಬರು ಸರಳೆಗೂ ಅದನ್ನು ತಿಳಿಸಿದರು. ಅವಳು ನಂಬಲಿಲ್ಲ. ಅವಳು ನಂಬುವಂತೆ ಮಾಡುವುದಕ್ಕಾಗಿ ಇಂಗ್ಲಿಷ್ ಪತ್ರಿಕೆಯೊಂದನ್ನು ತೋರಿಸಿ, ಅದರಲ್ಲಿ ಅವನ ಭಾವಚಿತ್ರವನ್ನು ತೋರಿಸಿದರು. ಆಗ ಸರಳೆಯು ದಿಗ್ಭ್ರಾಂತಳಾಗಿ ನೆಲಕ್ಕುರುಳಿದಳು.

ಮೊಗದಲ್ಲಿ ನಗುವಿಲ್ಲ; ಮನದಲ್ಲಿ ಶಾಂತಿಯಿಲ್ಲ; ಕೈಕಾಲುಗಳಲ್ಲಿ ಶಕ್ತಿಯಿಲ್ಲ; ದಿನವೂ ಕಂಗೊಳಿಸುವ ಮುಂಗುರುಳು ಇಂದು ಕಾಣುತ್ತಿಲ್ಲ;

ಲಲಾಟದಲ್ಲಿ ರಾರಾಜಿಸುತ್ತಿದ್ದ ಕುಂಕುಮದ ಕಳೆಯಿಲ್ಲ. ತಲೆಗೂದಲಲ್ಲಿ ಕಾಂತಿಸೂಸುತ್ತಿದ್ದ ಗುಲಾಬಿ, ಸಂಪಿಗೆ, ಜಾಜಿ ಹೂಗಳಿಲ್ಲ.

ಎಲ್ಲಿಯೋ ಹೋಗಿದ್ದ ಜಂಬುಕೇಶವಯ್ಯನವರು ಮನೆಗೆ ಬಂದರು. ಸರಳೆಯ ದುಗುಡವನ್ನು ನೋಡಿದರು. ಸರಳೆಯ ಸುತ್ತ ಸಮಾಧಾನ ಹೇಳುತ್ತ ಕುಳಿತಿದ್ದ, ಅವಳ ತಾಯಿ, ಅಜ್ಜಿ ಇವರನ್ನು ಕಂಡರು. ಅವರಿಗೆ ಏನೊಂದೂ ಅರ್ಥವಾಗಲಿಲ್ಲ.

ಸರಳೆಯ ಅಜ್ಜಿ ತನ್ನ ಮಗನೊಂದಿಗೆ ಎಲ್ಲವನ್ನೂ ವಿವರಿಸಿ ಹೇಳಿದಳು. ಜಂಬುಕೇಶವಯ್ಯನವರಿಗೆ ನೆತ್ತಿಯವರೆಗೆ ಕೋಪವೇರಿತು. "ಏ! ಸರಳೇ! ಏಳು ಮೇಲೆ, ನಿನಗೇನು ಬುದ್ಧಿ ಸಾಲದೆ?" ಎಂದು ಗದರಿಸಿದರು.

ಸರಳೆಯು ಕಣ್ಣೀರು ಒರಸಿಕೊಳ್ಳುತ್ತಾ ಸೆರಗನ್ನು ಸರಿಪಡಿಸಿಕೊಂಡು, ಎದ್ದುನಿಂತು, ತಲೆವಾಗಿ, "ಅಪ್ಪಾ! ನನ್ನನ್ನು ಪೂನಾಕ್ಕೆ ಕಳುಹಿಸು" ಎಂದು ಅಂಗಲಾಚಿ ಬೇಡಿಕೊಂಡಳು. ಬೇಡಿಕೆಗೆ ಬೆಲೆಯೆಲ್ಲಿ? "ಛೇ! ಕತ್ತೆ, ಅವನಂತೂ ಶುದ್ಧ ಅಯೋಗ್ಯ, ಸ್ವೇಚ್ಛಾಪರ, ಪೋಕರಿ, ರಾಜದ್ರೋಹಿ, ಸೆರೆಮನೆಗೆ ಹೋದ. ನಿನಗೇನು ಕಡಮೆ? ಇರು ಮನೆಯಲ್ಲಿ. ನಾನು ಬೇಕಾದ ಸೀರೆ ಒಡವೆ ತಂದುಕೊಡುತ್ತೇನೆ. ಬೇಕಾದಾಗ ಆಟಪಾಟ, ವಿನೋದಗಳನ್ನು ತೋರಿಸುತ್ತೇನೆ. ಹಾಡು ಹಸೆಯಲ್ಲಿ ಜಾಣೆಯಾಗಿ ಕೆಲಸಕಾರ್ಯಗಳನ್ನು ಮಾಡಿಕೊಂಡು ತಾಯಿಗೆ ನೆರವಾಗು" ಎಂದು ಮೂದಲಿಸಿದರು.

ಸರಳೆಯು "ಏನುಮಾಡಿದರೂ, ಏನು ಕೊಟ್ಟರೂ, ನನಗೆ ರುಚಿಸದು" ಎಂದೇಬಿಟ್ಟಳು.

ಜಂಬುಕೇಶವಯ್ಯನವರು ಕೋಪಾವೇಶದಲ್ಲಿ, ಹೆಂಡತಿಯೊಡನೆ "ಸಾಯಿ ಏ! ಲೇ! ಲೇ! ಸಂಧ್ಯಾವಂದನೆಗೆ ನೀರು ಇಡು. ನೋಡು; ನಿನ್ನ ಮಗಳು ದೊಡ್ಡ ಕತ್ತೆ; ವಯಸ್ಸು ೧೬ ಆಯಿತು. ಏನಾದರೂ ವಿವೇಕ ವಿದೆಯೇನೋ! ನಾನು ಅದಕ್ಕೇ ಗಂಡಹೆಂಡಿರನ್ನು ಸ್ವಲ್ಪ ಕಾಲವಾದರೂ ದೂರ ದೂರ ಇರಿಸಿದ್ದು. ಪರಸ್ಪರ ಸಮಾಗಮ ಇಲ್ಲದೆಯೇ ಇವಳಿಗೆ ಆ ಪೋಲಿಯ ಮೇಲೆ ಪ್ರೀತಿ. ಸರಿ...." ಎಂದು ಮುಂತಾಗಿ ಹೇಳುತ್ತಾ ಮಡಿ ಉಟ್ಟು ಸಂಧ್ಯಾವಂದನೆಗೆ ಕುಳಿತರು.

ಸ್ವಲ್ಪ ಹೊತ್ತಿನಲ್ಲಿಯೇ ಪಕ್ಕದಬೀದಿಯ ಸೋಮಶೇಖರಶಾಸ್ತ್ರಿಗಳೂ, ಭಾಗೀರಥಮ್ಮನವರೂ, ಅವರ ಹೆಣ್ಣುಮಕ್ಕಳೂ, ಅವರ ಮದುವೆಯ ರಾಜಭೋಜನಕ್ಕೆ ಕರೆಯಲು ಬಂದರು. ಜಂಬುಕೇಶವಯ್ಯನವರು ಬೇಗನೆ ಸಂಧ್ಯಾವಂದನೆ ಮುಗಿಸಿ ನಡುಮನೆಗೆ ಬಂದರು. ಸರಳೆಯು ಸದ್ದಿಲ್ಲದೆ ಕೊಠಡಿಯನ್ನು ಸೇರಿದಳು. ಸೋಮಶೇಖರಶಾಸ್ತ್ರಿಗಳು, "ಎಲ್ಲರೂ ದಯವಿಟ್ಟು ಈಗಲೇ ಭೋಜನಕ್ಕೆ ಬರಬೇಕು. ಎಲ್ಲವೂ ಸಿದ್ಧವಾಗಿದೆ" ಎಂದು ಹೇಳಿದರು.

ಸರಳೆಯು ಎಲ್ಲವನ್ನೂ ಕೇಳಿಸಿಕೊಂಡೇ ಇದ್ದಳು. ಬಂದಿದ್ದವರು ಹೊರಟು ಹೋದದ್ದೂ, ಸರಳೆಯ ತಾಯಿ ಸರಸರನೆ ಹೊಸ ಸೀರೆ ಉಟ್ಟು ಕೊಂಡದ್ದೂ, ಸಿಂಧುನಗರಾಧಿಪತಿಗಳು ಜರತಾರಿ ಪೀತಾಂಬರವನ್ನು ಧರಿಸಿದ್ದೂ ಎಲ್ಲವನ್ನೂ ಕಂಡಳು.

ಸ್ವಲ್ಪ ಹೊತ್ತು ಕಳೆಯಿತು. ಎಲ್ಲರೂ ಹೊರಟುಹೋದರು. ಮನೆಯಲ್ಲಿ ಸರಳೆಯಲ್ಲದೆ ಇನ್ನು ಯಾರೂ ಇರಲಿಲ್ಲ.

ರಾತ್ರಿ ಹತ್ತೂವರೆ ಗಂಟೆ; ಎಲ್ಲರೂ ತಾಂಬೂಲ ಸವಿಯುತ್ತ ಮನೆಗೆ ಹಿಂತಿರುಗಿದರು. ಬಂದ ಕೂಡಲೇ "ಸರಳಾ" ಎಂದು ಕೂಗಿದರು. ಬಾಗಿಲು ತೆರೆಯಲಿಲ್ಲ. ಒಂದು ಸಲ, ಎರಡು ಸಲ, ಮೂರು ಸಲ ಹೀಗೆ ಬಯ್ದಾಡಿ ಕೊಂಡು ಬಾಗಿಲು ಒಡೆದರು. ಒಳಕ್ಕೆ ಹೋಗಿ ಅಡಿಗೆಮನೆ ಕಡೆ ನೋಡಿದರು. ಸರಳೆಯು ಇದ್ದಕ್ಕಿದ್ದ ಹಾಗೆಯೇ ಗೊಂಬೆಯಂತೆ ಬಿದ್ದಿದ್ದಾಳೆ. ಅವಳ ಸುತ್ತಾ ಬರಿಯ ಬೆಂಕಿ; ಹೊಗೆ. ಮತ್ತೇನೂ ಇಲ್ಲ. ಸರಳೆಯು ಜ್ವಾಲೆಯಲ್ಲಿ ಐಕ್ಯವಾಗಿಬಿಟ್ಟಿದ್ದಳು.

